# ಪದ್ಯ ಸಂಗ್ರಹ.

ಸತ್ಯಾಗ್ರಹೀ ಮುದ್ರಣಾಲಯದಲ್ಲಿ ಮುದ್ರಿತವಾಗಿ ಪ್ರಕಟಿಸಲ್ಪಟ್ಟಿತು

ಕ್ರಯ: ೪ ಆಣೆ.

# ಮುನ್ನುಡಿ.

'ಸತ್ಯಾಗ್ರಹೀ'ಯ ಸಾಹಿತ್ಯ ವಿಭಾಗದಲ್ಲಿ ಆಗಿಂದಾಗ ಪ್ರಕಟವಾದ ಪದ್ಯಗಳಲ್ಲಿ ಕೆಲವನ್ನು ಈ ಚಿಕ್ಕ ಪುಸ್ತಕದಲ್ಲಿ ಸಂಗ್ರಹಿಸಿರುವೆವು. ಪದ್ಯಗಳನ್ನು ಬರೆಯಲು ಕಲಿಯುತ್ತಲಿರುವವರ ಪದ್ಯಗಳಿಂದ ಅನೇಕ ಕಾವ್ಯಗಳನ್ನು ಬರೆದಿರುವ ಕವಿಗಳ ಪದ್ಯಗಳ ವರೆಗಿನ ಎಲ್ಲ ತರದ ಪದ್ಯಗಳಿಗೂ ಇದರಲ್ಲಿ ಸ್ಥಳಸಿಕ್ಕಿರುವುದು. ಈಗಿನವರಿಗೆ ಯಾವ ತರದ ಪದ್ಯಗಳಲ್ಲಿ ಅಭಿರುಚಿಯು ಬೆಳೆಯುತ್ತಿದೆಯೆಂದು ತೋರಿಸುವುದೇ ಈ ಚಿಕ್ಕ ಸಂಗ್ರಹದ ಉದ್ದೇಶ.

**ಪ್ರಕಾಶಕ.**

# ಅನುಕ್ರಮಣಿಕೆ.

ಪುಟ.



# ಶುದ್ಧಾಶುದ್ಧ ಪತ್ರಿಕೆ.

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೧೩ | ೪ | ತಂಪು | ಕಂಪು |
| ೧೫ | ೫ | ಳಳನಗೆ | ಳಿಳನಗೆ |
| ೧೫ | ೧೦ | ಮಹಿಸುವಳೇ | ವಹಿಸುವಳೇ |
| ೧೭ | ೪ | ಕೆಂಪು | ಪೆಂಪು |
| ೨೨ | ೧೭ | ಮಳುಗುವ | ಮುಳುಗುವ |
| ೩೨ | ೧೧ | ಸೇದವು | ಸ್ವೇದವು |
| ೩೨ | ೧೫ | ಹೃದದುವಂ | ಹೃದಯವಂ |
| ೪೮ | ೧೧ | ವಿರಾಗ್ರಣಿ | ವೀರಾಗ್ರಣಿ |

# ಪದ್ಯಸಂಗ್ರಹ.



## ಲೀಲೆ.

(ಭಾಮಿನಿ ಷಟ್ಪದಿ.)

ಆದಿ ಪುರುಷನು ಆದಿ ಮಾಯೆಯು, ಆದರದಿ ಆನಂದ ಪಡುತಿರೆ | ಆದುದೀ ಜಗವೆಂದು ಪದಗಳ ರಚಿಸಿ ಪಾಡುವೆನು || ಆದಿ ಪುರುಷನ ಆದಿ ಮಾಯೆಯ | ಆದರದ ಆನಂದ ತುಂಬಿರೆ | ಆದುದೆನ್ನೀ ಕಾವ್ಯ ಕೆಡಹದೆ ಜಗವ ಮೋಹದೊಳು || ೧ ||

ಇಬ್ಬರಿಲ್ಲವು ಒಬ್ಬನಾತನು | ಇಬ್ಬರಂದದಿ ತೋರಿ ಆಡುವ | ಇಬ್ಬರಿಲ್ಲದೆ ಪ್ರೇಮವಿಲ್ಲವು ಸುಖವದೆಲ್ಲಿಯದು || ಒಬ್ಬನಲ್ಲದೆ ಪ್ರೇಮ ವಿದ್ದೆಡೆ | ಇಬ್ಬರೆಂದೊಡೆ ಅರ್ಥವಿಲ್ಲವು | ಇಬ್ಬರೆಂದೊಡೆ ಅರ್ಥವಿಲ್ಲವೆ ಬರಿದೆ ನುಡಿಯುವುದು || ೨ ||

ಮನುಜ ಆವರಲಿ ಒಬ್ಬ ನೀನಿಹೆ | ಘನದ ಪ್ರೇಮದೆ ಮುಳುಗಿ ನಲಿಯುವೆ | ಮನದಿ ಯೋಚಿಸೆ ಜಗದಿ ದುಃಖವು ಪ್ರಣಯ ಕಲಹ ವಲಾ || ಮನುಜ ನಿನಗಾ ದುಃಖ ಬೇಡವೆ | ಘನದ ಕರ್ಮವ ಬಿಡಲದೇ ತಕೆ | ಮನದಿ ಪ್ರೇಮದ ತಿಳಿವು ತೋರಲು ದುಃಖ ಸುಖವಹುದು || ೩ |

ಚೆಲುವ ಪುಷ್ಪವ ನೋಡು ಎನ್ನೀ | ಚೆಲುವ ಕಾವ್ಯವ ನೋಡು ಕರ್ಮವ | ಬಳಿಕ ಬಿಡದಾನಂದವೀಯುವೆ ಅಂತೆ ನೀನಾಗು | ಚೆಲುವ ದೇವನ ಭಜಿಸು ಪ್ರೇಮದೆ | ತಿಳಿದು ಜ್ಞಾನದೆ ನೀಗು ದುಃಖವ | ಬಳಿಕ ಕರ್ಮವೆ ಪೂಜೆಯಲ್ಲವೆ ಧನ್ಯ ನೀನಲ್ತೆ || ೪ ||

ಕಾಳಿ ಘೋರಾಕಾರೆ ರುಂಡದ | ಮಾಲೆ ಧರಿಸಿಹೆ ರಕ್ತಧಾರಾ | ಕಾಲ ನರ್ತನ ತಾಳಲಾರದೆ ಬೆದರೆ ಜಗವೆಲ್ಲ || ಕಾಲಮೃತ್ಯುವ ಸಕಲ ದುಃಖವ | ತಾಳಬಲ್ಲೆನು ನಾನು ನಿರ್ಭಯ | ಕಾಳಿ ನಿನ್ನಯ ಮೇಳದಲಿ ನಾಂ ನಗುತ ಕುಣಿಯುವೆನು || ೫ ||

ರಮಣಿ ನೀ ಸರ್ವಾಂಗ ಸುಂದರಿ | ಕಮಲಲೋಚನೆ ಮನದ ಮೋಹನೆ | ಸುಮನಸಾದ್ಯರು ನಿನ್ನ ಚುಂಬನ ಬಯಸಿ ಕೆಡುತಿಹರು ||

ರಮಣಿ ನಿನ್ನೊಡನಾಡಿ ಸುಖಿಸೆನು | ಕಮಲೆ ಮೋಹದ ಸೋಂಕು ಇಲ್ಲವು | ಕಮಲಪತ್ರವು ಜಲದಿ ತಾನಿರೆ ಜಲವು ತಾಗದೊಲು || ೬ ||

ಕೇಳುವುದು ಪಾಶ್ಚಾತ್ಯ ಜನರಿರ | ಘೋಳ ರಕ್ಕಸ ವಿದ್ಯೆ ನಿಮ್ಮದು | ಭಾಳಲೋಚನ ಪದವ ನೆನೆಯಲು ಮುಕ್ತಿದೊರೆಯುವುದು || ಲೀಲೆಗೋಸುಗ ನಿಮ್ಮ ವಿದ್ಯೆಯು | ತಾಳಿ ನಲಿಯುವೆ ಲೋ- ರಂಗದಿ | ಭಾಳಲೋಚನ ಪದವ ನಂಬಿರೆ ಮುಕ್ತನಾನಲ್ತೆ || ೭ ||

ಬಂಧನದ ಮಧ್ಯದಲಿ ಮುಕ್ತನು | ಬಂಧನವ ಕೈಗೊಂಬೆ ಪ್ರೇಮದ | ಬಂಧನದ ಸವಿಯರಿತು ನಲಿಯುವೆ ಲೋಕರಂಗದಲಿ || ಬಂಧುಬಳಗವ ಬಿಡಲಿದೇತಕೆ | ಮುಂದೆ ನಡೆವುದು ಕರ್ಮಪಥದಲಿ | ಬಂಧುವರ್ಗದ ಪ್ರೇಮಸಾರವ ಕುಡಿದು ಕುಣಿಯುವೆನು || ೮ ||

ಜಾತಿಭೇದವ ಬಿಡಲದೇತಕೆ | ಜಾತಿಗಳ ಸಮತತ್ವವರಿತಿಹೆ | ಜಾತಿಜಾತಿಗೆ ಪ್ರೇಮವಿನಿತಿರೆ ಎಲ್ಲ ಸಮವಹುದು || ಜಾತಿ ತುಂಬಿದೆ ಸಕಲಲೋಕದಿ | ಜಾತಿ ಇಲ್ಲದೆ ಕರ್ಮರಂಗವೆ | ಜಾತಿಧರ್ಮವ ಬಿಡದೆ ನಡೆವೆನು ಕರ್ಮಮಾರ್ಗದಲಿ || ೯ ||

ದೇಶದೇಶಕೆ ಕಲಹವೇತಕೆ | ದೇಶವೆಲ್ಲವು ಲೋಕವಲ್ಲವೆ | ದೇಶ ಸ್ವಾರ್ಥವ ಬಿಟ್ಟು ಲೋಕವೆ ದೇಶವೆನ್ನುವುದು || ದೇಶದೇಶಕೆ ಪ್ರೇಮ ವಿನಿತಿರೆ | ದೇಶಪ್ರೇಮದೆ ದೋಷವಿಲ್ಲದೆ | ದೇಶಸೇವಾವ್ರತದಿ ನಲಿಯುವೆ ಕರ್ಮರಂಗದಲಿ || ೧೦ ||

ಸ್ವಾರ್ಥದಲಿ ತುಂಬಿಹುದು ದುಃಖವು | ಸ್ವಾರ್ಥ ಬಿಡುವುದು
ಧರ್ಮ ಬಿಡುವುದೆ | ಸ್ವಾರ್ಥಧರ್ಮಗಳೊಳಗೆ ಭೇದವ ತಿಳಿದು ವರ್ತಿ
ಪುದು || ಸ್ವಾರ್ಥ ಬಿಡುವುದೆ ದೊಡ್ಡ ತ್ಯಾಗವು | ಸ್ವಾರ್ಥವೆಂಬುದೆ
ದುಃಖಕಾರಣ | ಸ್ವಾರ್ಥವೆಂಬುದ ಬಿಟ್ಟು ಪ್ರೇಮದೆ ನಲಿದು ಬಾಳು
ವುದು || ೧೧ ||

ಸತಿಪತಿಯರೊಳು ಕಲಹವೇತಕೆ | ಸತಿಗೆ ಪತಿಯೇ ದೈವವ
ಲ್ಲವೆ | ಪತಿಯ ಹೃದಯದ ಒಡತಿ ಸತಿಯಳು ತಿಳಿದು ನೋಡುವುದು ||
ಸತಿಪತಿಯರೊಳು ಪ್ರೇಮವಿನಿತಿರೆ | ಸತಿಪತಿಯರೊಂದಾಗಿ ನಡೆವರು |
ಸತಿಯ ಪ್ರೇಮದೆ ಪತಿಯು ನಲಿಯುತೆ ಒಂದುಗೂಡುವುದು || ೧೨ ||

ರಮಣನಾತನು ಕಠಿಣ ಚಿತ್ತನು | ರಮಣಿ ಕೋಪಿಸೆ ಬಂದು
ನುಡಿಸನು | ರಮಣಿಯೊಲಿದರೆ ಅಂತ್ಯವಿಲ್ಲದ ಸುಖವ ಕೊಡುತಿಹನು ||
ರಮಣನಾತನ ಕಠಿಣ ಚಿತ್ತವು | ರಮಣಿ ತಿಳಿ ಮೃದುವಾಗಬಲ್ಲುದು |
ರಮಣನೊಲವನು ಪಡೆದು ಸಂತಸದಿಂದ ಬಾಳುವುದು || ೧೩ ||

ಮನದ ಮೋಹನೆ ನಿನ್ನ ಮಧುರತೆ | ಮನದಿ ಕಳವಳ ತುಂಬಿ
ಕೆಡಹಿತು | ಮನದ ತಾಪವ ತಣಿಸೆ ಚುಂಬನ ಬಯಸಿ ಬೇಡುವೆನು ||
ಮನದಿ ನೆನೆಯುಲು ನಿನ್ನ ಅಂದವ | ಮನಸಿಜನ ಶರಘಾತ ತಿಳಿದೆನು |
ಮನದಿ ಘನತರ ಸುಖದ ಲಾಲಸೆ ಪುಟ್ಟಿ ಕೊರಗುತಿಹೆ || ೧೪ ||

ಇನಿಯ ನಿನ್ನಯ ಮನದ ಕಳವಳ | ಘನದ ಪ್ರೇಮವೆ ಎನ್ನ ಪ್ರೀತಿಸು | ಎನಗೆ ತೃಪ್ತಿಯದಿಲ್ಲ ಎನ್ನಯ ಸೊಬಗ ಪ್ರೀತಿಸಲು || ಮನದಿ ಸುಖದಭಿಲಾಷೆ ಪುಟ್ಟಿರೆ | ನೆನೆಯುವುದು ನೀ ನಿತ್ಯ ಸುಖವನು | ಮನದ ದಮನದೆ ನೈಜ ಪ್ರೇಮವು ಜನಿಸೆ ಸುಖಿಸುವುದು || ೧೫ ||

ತಾಯೆ ಜೋಡುನೆ ಮುದ್ದನೊಂದನು | ತಾಯೆ ಕಥೆಯನು ಪೇಳ ಲಾರೆಯ | ತಾಯೆ ಪದಗಳ ಪಾಡಿ ತೂಗಲು ಮತ್ತೆ ಮಲಗುವೆನು || ತಾಯೆ ಎನ್ನೊಡನಾಡಲಾರೆಯ | ತಾಯೆ ನಿನ್ನಯ ಸೇವೆ ಗೈಯಲು | ಸಾಯಕವ ಕೈಗೊಂಬೆ ತಡೆಯದೆ ನೋಡು ಸಾಹಸವ || ೧೬ ||

ಬಾಲನಳುವನು ಮತ್ತೆ ನಗುವನು | ಬಾಲನಳುವುದದೇಕೆ ಪೇಳಿರಿ | ಬಾಲ ನಗುವಾ ಪರಿಯ ಬಲ್ಲರು ಪೇಳಿ ಕೇಳುವೆನು || ಬಾಲ ನಿನಗೀ ಹಾಲನುಣ್ಣಿಪೆ | ಬಾಲಕನ ಎದೆಗೊತ್ತಿ ಮುದ್ದಿಪೆ | ಬಾಲನಿಲ್ಲದೆ ಬಾಳ ಲೆಂತೋ ತಿಳಿಯಲಸದಳವು || ೧೭ ||

ಗೋಪವನಿತಾ ವಸನ ಸೆಳೆಯುವ | ಗೋಪಬಾಲನು ಬಾಲನೀ ತನೆ | ಗೋಪವಧು ತಾಂ ರಾಧೆ ಧನ್ಯಳು ಪಡೆದು ಕೃಷ್ಣನನು || ಗೋಪಿ ಯರೆ ಸಾಕೀಗ ಪೋಗಿರಿ | ಗೋಪಬಾಲನು ಬಹಳ ಜಾಣನು | ಗೋಪ ಬಾಲನ ಬರಿದೆ ದೂರದೆ ಪಾಡಿ ಪೊಗಳುವುದು || ೧೮ ||

ಕೃಷ್ಣ ನಿನ್ನಯ ಸೊಬಗದೆನಿತೋ | ಕೃಷ್ಣ ತುಂಬಿಹ ಸಕಲ ಲೋಕದಿ | ಕೃಷ್ಣನೂದುವ ಕೊಳಲ ಸರವನು ಕೇಳಿ ನಲಿಯುವುದು ||

ಕೃಷ್ಣ ಪ್ರೇಮವೆ ನೈಜ ಪ್ರೇಮವು | ಕೃಷ್ಣ ನಿನ್ನನು ಪಡೆಯೆ ಧನ್ಯರು |
ಕೃಷ್ಣ ನಿನ್ನಯ ನಾಮ ಪೇಳಲು ಮನದಿ ಸುಖವಹುದು || ೧೯ ||

ಕೊರಲೊಳೀಸೀ ಸರ್ಪ ವಿಷವದು | ಉರಿಯುತಿಹುದೀ ಜಗವ ದೆಲ್ಲವು | ಧರಿಸಿ ಭಸ್ಮವ ಶವಗಳೆಡೆಯಲಿ ನಗುತ ಕುಣಿಯುವೆಯ ||
ಹರನ ಹೃದಯದಿ ಪ್ರೇಮವಿರುವುದೆ | ಪರಮ ಸನ್ಯಾಸಾವಲಂಬಿಯು |
ಸೆರೆದು ಹೃದಯದಿ ಪ್ರೇಮಸಾರವು ಅಡಗಿಕೊಂಡಿಹುದು || ೨೦ ||

ವಾರಿಧಿಯು ತಪ್ಪಿದನೆ ಮೇರೆಯ | ನೀರು ತುಂಬಿತು ಎಲ್ಲ ಲೋಕದಿ | ನೀರ ಶಬ್ದ ಮನುಳಿದ ಶಬ್ದ ಮದಿಲ್ಲ ನಿಶ್ಶಬ್ದ || ಘೋರ ತೆರೆಗಳು ಸಾರಿ ಬರುತಿವೆ | ಸಾರಿ ಬರುವನು ಆಲದೆಲೆಯಲಿ | ತೋರ ಬಾಲನು ಕರದಿ ಕಾಲನು ಪಿಡಿದು ನಗುತಿಹನು || ೨೧ ||

ಮರುಳು ಮಾನವ ನಾನು ಮದುಕನೆ | ಭರದಿ ಯೌವನ ತುಂಬಿಕೊಂಡಿದೆ | ಜರೆಯು ಮೃತ್ಯುವು ಎಲ್ಲವೆನ್ನಯ ಹಾಸ್ಯವೇಷ ಗಳು || ಮೆರೆವ ಯೌವನ ಪ್ರೇಮ ಭರದಲಿ | ತರುಣಿಯೋರ್ವಳ ಸೃಜಿಸಿ ಯಜ್ಞದಿ | ತರುಣಿಯಳನೊಡಗೂಡಿ ಸುಖಿಪೆನು ನಿತ್ಯ ಸುಖವೆನಗೆ || ೨೨ ||

ಆತ್ಮಯಜ್ಞದಿ ತರುಣಿ ಬಂದಳು | ಆತ್ಮದಲಿ ತಾನಡಗಿ ಇದ್ದಳು |
ಆತ್ಮಯಜ್ಞವು ಸುಖವ ಕೊಟ್ಟಿತು ಆತ್ಮಭವೆಯಿಂದ || ಆತ್ಮನಿಂದಲೆ ತೃಪ್ತಿ ಆತ್ಮಗೆ | ಆತ್ಮಯಜ್ಞಕೆ ಪ್ರೇಮ ಕಾರಣ | ಆತ್ಮಯಜ್ಞವ ಗೈದು ಪ್ರೇಮದಿ ಸುಖವ ಪಡೆಯುವುದು || ೨೩ ||

ಜನರ ಹೃದಯದಿ ಪ್ರೇಮ ಬೆಳಗಲಿ | ಜನರು ನಲಿಯಲಿ ಕರ್ಮ
ರಂಗದಿ | ಜನರಿಗೋಸುಗ ಬರೆದುದೀಕೃತಿ ಧನ್ಯವೆನ್ನಿಸಲಿ || ಮನದಿ
ನೆನೆಯುವೆ ಕೃಷ್ಣ ಪ್ರೇಮವ | ಮನದ ಮೋಹನ ದೇವಗರ್ಪಣ |
ಮನದಿ ಬೇಡುವೆ ಜಗಕೆ ಶುಭವನು ಮತ್ತೆ ಮಂಗಳವ || ೨೪ ||

ಹಿ. ರಾ.

# ಒಂದು ಪದ್ಯ.

ಎಲ್ಲಿಹನೆಲ್ಲಹನೋ? | ಧರೆಯನಲ್ಲ | ಎಲ್ಲಿಹನೆಲ್ಲಿಹನೋ? || ಪಲ್ಲ ||
ಇಲ್ಲಿಲ್ಲೆಂಬುದು | ಸಲ್ಲದು ಭೇದವು ||
ಸುಲ್ಲಭದಲಿ ತ- | ನ್ನಲ್ಲಿ ತಾನೆ ಹರಿ || ಅನುಪಲ್ಲ ||

ಎಲ್ಲಿ ಅವನ ಊರು? | ಬಲ್ಲವರಾರು? ||
ಎಲ್ಲಿ ಅವನ ಬೀಡು? | ನಿ- | ನ್ನಲ್ಲೆ ನೋಡು ||
ಎಲ್ಲಿ ಕೊಳಲ ಪಿಡಿ ! ದೆಲ್ಲಿ ಗೊಲ್ಲರ ಕೂಡಿ ||
ಸಲ್ಲದ ಠಾವಿಲಿ | ಮೆಲ್ಲಡಿ ಇಡುವನೋ || ೧ ||

ಕಾಲ ಲವಕ್ಕಿಲ್ಲ | ಕಾಲಿಡೆ | ಭೂಮಿ ಸಾಲದಲ್ಲ ||
ಮೇಲುಕೀಳ್ಗಳಿಲ್ಲ | ಕೂಗಿಡೆ | ನಾಲಗೆ ಬಲಸಲ್ಲ ||
ತೋಳಬಳಿಯಲೇ | ಆಳಾಗಿರುವನು ||
ಜೋಳಿಗೆ ಹೊರುವರ | ಪಾಳೆಯ ಗಾರನು || ೨ ||

ಕರೆದರೋಡುತಿಹನು | ಕರೆಯದೆ | ಧರದಲೋಡಿ ಬಹನು ||
ಮೆರೆಯಿಸುವನು ಸತತ | ಮರೆದರೆ | ಮರುಗಿಸುವನು ನಿರತ ||
ಸುರಿದು ತನ್ನನವ | ನೆರಕದಿ ಚಿರೆತರೆ ||
ಮಿರುಗು ಪುತ್ಥಳಿಯು | ಮೆರೆಸುವೆಮ್ಮರಸ || ೩ ||

ಎಮ್. ಎನ್. ಕಾಮತ್.

## ತನಗೆ ತಾನಲ್ಲದಿನ್ನಾರು?

ತನಗೆ ತಾನಿಲ್ಲದಿರಲನ್ಯರಿಹರೆ? | ಎಣಿಸಲ್ ಪರೋಪಕೃತಿಗೂ
ಮೊದಲಿದರಿಯೆ || ತನಗೆ || || ಅನುಪಲ್ಲ ||

ಕೆಂಡದಾ ಮಳೆ ಬರುವ ವೇಳೆಯಲಿ ಮಕ್ಕಳನೆ | ಕೊಂಡು
ಕೊಡೆಯಿಡಿವರೆನ್ನುವ ನುಡಿಯ ವೊಲ್ || ಕಂಡು ಕೇಳಿದ ತಿಳಿದ ಕಡೆ
ಯೊಳೆತ್ತೆತ್ತಲಡಿ | ಗೊಂಡಿದೇ ಹಾಸು ಹೊಕ್ಕಾಗಿ ಹೆಣೆದಿರಲೂ || ೧ ||

ಎಲ್ಲವಕ್ಕಾಧಾರವಾಗಿರುವ ಭೂಮಾತೆ | ಗೆಲ್ಲಿ ನೆಲೆ? ನೆಲೆಯಿರದ
ಕಡಲಲ್ಲವೆ? || ಬಲ್ಲವಿಕೆಯಿಂ ತಾನೆ ತನ್ನ ನಾನದಿರಲಡಿ | ಯೆಲ್ಲಿ ನಡೆ
ಯೆಲ್ಲಿ ನುಡಿಯೆಲ್ಲೆಲ್ಲಿಯೊ? || ೨ ||

ಗಾಳಿಗೆಯ್ಯಲ್ಲಿ ಮುಗಿಲೋಳಿಯಲಿ ನೆಲದಲ್ಲಿ | ಬೀಳುವುದೆ ಗತಿ
ಯಾಗೆ ಮೂಲವಳಿದು || ಹಾಳಾಗಿ ಜೀವನವೆನಿಸುತಿತ್ತೆ ನೀರನಿಧಿ |
ಯಾಲಯವನಾಂತು ನೆಲೆಗೊಂಡುದಲ್ತೆ || ೩ ||

ಮೂರು ಮೂರ್ತಿಗಳಿಗೊಂದೂರು ತೇಜೋರಸ । ಕ್ಕಾರಯ್ಯ
ಉಕ್ಕುಡಿಪ ಚಿಲುಮೆಯೆಂಬ ॥ ಸೂರ್ಯಂ ಬಕ್ಕಂಬಯಲೊಳಾದರೇ
ನಾನೆ । ಯೂರಿದವಿಯನ್ನುಳಿಗಿಸುವರದಾರು? ॥ ೪ ॥

ಗಾಳಿಯಿರದೆಳ್ಳಿಂದಲೇಳಸೆಯು ಕಾಲವ್ಹಾ । ಬಾಳದಿಳೆ ತನ್ನನೇ ಬಲಿ
ಯಿಸಿತ್ತುಂ ॥ ಬಾಳುವನವಂ ಲೋಕಜೀವನೆಂದೆನಿಪನಾ । ಲೀಲೆಯ
ನ್ನಿಗರಕಯ್ಯ ಮರಲಿಹುದೆ? ॥ ೫ ॥

ತಡೆಯಿಲ್ಲದೆಲ್ಲವಕ್ಕೆಡೆಯಿತ್ತು ಪೋದಕಿಸಿತಡಿ । ಗೊಡದ ಬಾನೆ
ಲ್ಲವರೊಳು ಸೇರಿ ॥ ನಡೆಯಿಪುದು ವ್ಯಾಪಕತೆಗೊಡಲಾದ ಕತದಿಂದ ।
ಪಡೆಯಲಾದಪುದೆ ವ್ಯೋಮಯನು ಬರಿದೆ? ॥ ೬ ॥

ಪಂಚಭೂತಗ ಮಯ್ಯ ಮನೆಯೊಳೊಂದೂ ನೆಲಸಿ । ಹಂಚಿಸನಿ
ತಾದರೂ ತದ್ಗುಣವನು ॥ ಸಂಚಿಸದಿರಲ್ಕೆ ಫಲವೇನು ಮನುಜತೆ
ಗೊಂಡು? । ಸಿಂ ಚಲಿಸದೆಣಿಸು ಕಯ್ಗೊಳಿಸು ಕಲಿಸು ॥ ೭ ॥

ಕವಿ ಮುಳಿಯ ತಿಮ್ಮಪ್ಪಯ್ಯ.

# ಭಿಕ್ಷುಕ

('ಕುಸುಮದಾಮ'ದಿಂದ.)

(ಸೀಸ ಪದ್ಯ.)

ಕೇರಿಕೇರಿಗಳ ಮನೆಮನೆಗಳಂ ಕಂಡೊಡನೆ
ವಾರಾನ್ನಕಾಗಿ ಸಂಚರಿಸುತಿಹೆನು |
ದೂರದೊಳ್ ಪೋಪವರ ಬೆಂಬಿಡದೆ ಕಾಲ್ಗೆರಗಿ
ತೋರಿಸೆನು ಕೈಯೊಳಿಹ ಜೋಳಿಗೆಯನು ||
ಊರೊಳನಗೊಲಿದೀವ ದಾಸಿಯಂ ಕಾಣೆ ಪರ
ಲೋಕ ಮಾರ್ಗವನರಸಿ ಪೋಪೆ ನಿನ್ನು |
ಧಾರಿಣಿಯೊಳೆನ್ನರಸನೆಲ್ಲಿಹನೊ ತಿರಿತಿರಿದು
ಬಳಲಿ ಬೆಂಡಾಗಿ ಕಂಗೆಟ್ಟೆ ನಾನು || ||೧||

ಸಿರಿಯು ಒಳ್ಳಿಯು ಸೊಂಪಿನಿಂದೆ ನಗೆಯೆಂಬ ಹೂ
ವರಳಿ ಕಂಪಿನಲಂಪನೀವುದೆಲ್ಲಿ |
ಕೊರಗುತಿಹ ಬಡತನದ ಕಣ್ಣೀರೆ ಕಾಲಾಗಿ
ಹರಿದು ತಂಪನು ತಾನೆ ಕೊಡುವುದಲ್ಲಿ ||
ಪರಿಗೆಡಿಪ ಸಂಕಟದ ನಿಬಿಡಾಂಧಕಾರವದು
ವಾರಿಗಾಣದ ತೆರದೊಳಾವರಿಸಿರೆ |

ಮಿರುಗುತಿಹ ಗುಣವೆಂಬ ನಸುವೆಳಕ ನೊಪ್ಪಿಸುತೆ
ತಳತಳಿಸಿ ಬೆಳಗುತಿಹುದೊಂದು ತಾರೆ ॥ ॥ ೨ ॥

ಧನವಿಪ್ಪ ಕೈಗುದುರೆಯುಂ ದಾನ ಮಾರ್ಗದಿಂ
ಮನವೆಂಬ ಕಡಿವಾಣ ವೆಳೆಯುತಿಹುದು ।
ಸಿರಿಯು ರೆಕ್ಕೆಗಳಿರದೆ ಬಗೆವಕ್ಕಿ ಹಾರಲ
ವ್ವಳಿಸಿ ಕಳವಳಿಸಿ ಬೀಳುತ್ತಿರ್ಪುದು ॥

ಸರಿಯೆನಿಸಿ ಕೈಗೆ ಬಗೆ, ಬಗೆ ಕೈಗೆ ಜೋಡೆನಿಸಿ
ಮೆರೆಯಲುಂಟೀ ಧರಾಮಂಡಲದೊಳು ।
ಅರಸ ತಲೆವಾಗಿಸುವೆ ನೀನೋರ್ವನೇ ದಾತ
ನಿರದೆ ತಿರಿದುಂಬೆ ನಿನ್ನರಮನೆಯೊಳು ॥ ॥ ೩ ॥

ದೇಹದೀ ಪಾತ್ರೆಯುಂ ನಿನ್ನ ಕೈಗೊಪ್ಪಿಸುವೆ
ಮನಕೆ ಮೆಚ್ಚಿಂತಾದುದಂತೆ ಮಾಡು ।
ಜೀವದಾನದಿನದಂ ತುಂಬಿಪೆಯೊ ತುಂಬಿಸದೆ
ಪಿಸುಡುವೆಯೊ ನೀನೆ ನಿನ್ನೊಳಗೆ ನೋಡು ॥

ಧಾರಿಣಿಯ ಸಂತೆಯೊಳು ಭಿಕ್ಷುಕನ ಮಾಳ್ಕೆಯೊಳು
ತಿರುಗಿದರೆ ಬಪ್ಪ ಬಡತನವದೇನು? ।
ನೀನೆ ಧನಿ ಜಗಕೆಲ್ಲ ನಿನ್ನ ಧನವೆನ್ನಸಿರಿ
ಭೇದವಿಲ್ಲದ ಮೇಲೆ ಮರುಕವೇನು? ॥ ॥ ೪ ॥

ಶಂಕರಭಟ್ಟ ಕಡಂಗೋಡ್ಲು.

# ದೊರೆ.

('ಕುಸುಮದಾಮ'ದಿಂದ.)

### ಉತ್ಸಾಹರಗಳೆ

ಸುಳಿವ ಸೊಲ್ಲಲರ್ಗೆ ತಳೆಯನೊಲೆದು, ನಿನ್ನ ಸೋಂಕನರಿಯೆ
ಪುಳಕಚಯವನೊಂದಿಪಂತೆ ತಳಿರನೊಬಗು ರೂಢಿವಡೆಯೆ, ||
ನಲಿವ ನಲ್ಮೆ ನುಣ್ಪುವಡೆಯೆ, ಮನದ ಬೇಸೆ ತಣ್ಪುವಡೆಯೆ,
ಸುರಿವ ಲತೆಯೊಳಡಗುತೆನಗೆ ತೋರದಿರ್ಪುದೇಕೆ ದೊರೆಯೆ || ೧ ||

ಆವಸಂತವೊಪ್ಪುತಿಹುದು ಚಿಗುರೆಜಗವ ಬಾಸಣಿಪುದು
ಕೋಗಿಲೆಗಳ ದನಿಯು ಸವಿಯು ಸವಿಯುಲಾಸೆಯಾತುರಿಪುದು ||
ಭೂವನಿತೆಯು ಯೌವನಾನುರಾಗರಸದ ರೂಪಕದೊಳು
ತೀವಿ ಹಸುರಪರದೆಯೊಳಗೆ ತೋರದಿರ್ಪೆಯೇಕೆ ಪೇಳು || ೨ ||

ಕೆಂಬಿಸಿಲ ಕಿರೀಟವೀಗ ಳಿಂಬುಗೊಂಡು ಶೋಭಿಸುವುದು
ತುಂಬಿ ಜಗವ ಗಾನರಸದೆ ಪಕ್ಕಿಪಿಂಡುಗೊಂದಳಿಪುದು ||
ಸಂಜೆ ಹೊಂಜರಗಿನೊಳರಸ ನಿನ್ನ ಪದವ ತೊಡೆವಳವಳು
ಬಂಜೆಯಾಯ್ತು ನಿನ್ನ ಕಾಣದೆನ್ನ ದೃಷ್ಟಿಯೇಕೆ ಪೇಳು || ೩ ||

ಗಗನವೆಂಬ ಮಂಟಪದಲಿ ನಿನಗೆ ರಾಜ್ಯಭಾರವಂತೆ
ಜಗವೆ ನಿನ್ನ ಪೆರ್ಮೆಯೊಪ್ಪುವೋಲಗಕ್ಕೆ ಸಾಲೆಯಂತೆ ||

ಒಡೆಯ ನಿನ್ನ ಕಾಂಬಸಂಭ್ರಮಂಗಳಿಂತು ಪೆರ್ಚುತಿರಲು
ನಡಗರನೇ ಶೂನ್ಯವಾಗದಿಹುದೆ ನಿನ್ನ ಕಾಣದಿರಲು || ೪ ||
ಗಾನದೆಡೆಯ ಸುಣ್ಪುಸೀನೆ, ಗಂಧವಹನ ತಂಪು ನೀನೆ ೯೦/
ಜೇನಸೋನೆಯಿಂಪುಸೀನೆ, ಬಿರಿವ ಮುಗುಳ ತಂಪು ನೀನೆ
ಭಾನುವಿಂಗೆ ಭಾನು ನೀನೆ ಕರಣವೆಂಬ ದಾರಿವಿಡಿದು
ನೀನೆ ಮನದ ರಾಜ್ಯದೊಳಗೆ ದೊರೆಯೆನಿಸುತೆ ಮೆರೆವುದೊಲಿದು || ೫ ||

ಶಂಕರಭಟ್ಟ ಕಡಂಗೋಡ್ಲು.

---

# ವಸಂತ.

(ಭಾಮಿನಿಷಟ್ಪದಿ)

ನಲಿದುಲಿದು ಝೇಂಕರಿಪ ಮಧುಪಾ | ವಳಿಯು ಪಂಚಮ
ಗಾನ ಘನಮಂ | ಜುಲಕಲಧ್ವನಿಯೆನ್ನ ಮನದೊಳವರಿಯನಂಡಲೆದು ||
ಸುಳಿವುದಾದೊಡಮೇನೊ, ಮಧುಮದ | ವಿಲಸಿತಂಗಳೆ ಕಂಗಳನು
ಸಂ | ಗಳಿಪುವೆನೆ ಪರದಾಸ್ಯ ವ್ಯಕ್ತಿಯದೇನನಾಗಿಸದೊ || ೧ ||

ವಾರಿಜೋನ್ನತ ಪತ್ರನೌಸಂ | ಚಾರಿ ರಸಸರ್ವಸ್ವ ಸಂಚಯ |
ಹಾರಿ ಹಂಸಕವೆನ್ನ ಮಾನಸ ಮಧ್ಯವನು ಬೆಳಗಿ || ಬೀರುವುದು ಸಂತ
ಸವನಾದೊಡೆ | ವಿಾರಿದದರುದರಾಭಿಲಾಷೆಯೆ | ಹೇರುವುದು ಚಿಂತೆ
ಯನು ದಾಸ್ಯವದೇನನಾಗಿಸದೊ || ೨ ||

ತರಲತರಸಹಕಾರ ಪಲ್ಲವ | ಪರಿಣತಾಂಗ ಬಲೋದಯನು
ಪರ | ಸೆರಕದಿಂ ಪಡಿಯುರನು ಪರಪರಿಪುಷ್ಟನೆಂದೆಂಬ || ಬಿರುದನಂಗೀ
ಕರಿಸಿ ಲೋಕೋ | ದ್ಧುರ ಮಹಾರಿಷ್ಟವನು ಲೆಕ್ಕಿಸ | ದರರೆ ಹಾರು
ವನೆನಲು, ದಾಸ್ಯವದೇನನಾಗಿಸದೊ || ೩ ||

ಮಧುರವಿಮಲ ವಚೋವಿತಾನಾ | ಭ್ಯುದಯ ಪಂಡಿತನುನ್ನತ
ದ್ವಿಜ | ಸದನವದನವಿಲಾಸದರ್ಪಣನೆಂಬ ಕನ್ನಡಿಗಂ || ಪಡೆದು ಪರ
ನನು ಕರಣೆಯಿಂ ಲೋ | ಕದೊಳು ತಾನೇ ತಾನ್ಪ್ರಮುಖನೆಂ |
ದೊದರುತಿರೆ ಪರದಾಸ್ಯ ವೃತ್ತಿಯದೇನನಾಗಿಸದೊ || ೪ ||

ಧರೆಯುಗಲದೋಲೆಯೊಳು ವಿಧಿ ಬರೆ | ದಿರಿಸಿದೀ ಸ್ವಾತಂತ್ರ್ಯದ
ಕ್ಷರ | ಪರಮ ವಿಭವವನೋದದತುಲ ವಿಲಾಸ ಸಂಭ್ರಮದಿ || ಮೆರೆವ
ರರಿಯರು ಜಾತಿಹೀನನ | ವರವಸಂತನೃಪಾಲಕನ ಪೆಯರ್ | ಸಿರಿವಿಜಾ
ತಿಯ ಬೊಬ್ಬೆಯುಬ್ಬರಕೆಂದು ಬುಧಜನರು || ೫ ||

ಶಂಕರಭಟ್ಟ ಕಡಂಗೋಡ್ಲು.

## ಸಂಜೆ.

ಸಂಜೆಯೆ ಭರದಿಂದಂಜಿಸೆ ಜಗವ |
ಮಂಜುಮುಸುಕೆ ಪದ್ಮಿನಿಯಾ ಮೊಗವ ||
ಕಂಜಸಖನೆ ಮುನ್ನೀರ್ವಾಸಿಂದೆ |
ಸಂಜನಿಸುವ ಕುತ್ತಕೆ ತುತ್ತಾದೆ || ೧ ||

ಜಗಕಾವನು ಕಾವನು ನೀನ್ನೈದೆ |
ಬಗೆಯಿಂತಿದು ಬೆಂಡಪ್ಪುದು ಪಿರಿದೆ? ||
ನಗುವೊಗದೊಪ್ಪುವ ನುಣ್ಬೊಗರಿಂದೆ |
ಸೊಗವಾದುದು ಲೋಕಕೆ ನಿನ್ನಿಂದೆ || ೨ ||

ಉದಯದೊೞಳನಗೆದೋರಿದಳಾಕೆ |
ಹೃದಯದೊಳೊಪ್ಪಿರೆ ಕೂಟದ ಬಯಕೆ ||
ಪುದುಳದೆ ಪೂರ್ವಾಂಗನೆಯೊಡಗೂಡಿ |
ಮುದವಂ ಮುಕ್ಕುಳಿಸಿದೆ ಮರೆ ಮಾಡಿ || ೩ ||

ಸಹಿಸುವಳೇ ವಿರಹದ ಬೇಸೆಯನು |
ಮುಹಿಸುವಳೇ ಸಿಂಗರದಂಗವನು ||
ದಹಿಸುವಳಲಬೆಂಕೆಯ ಪೊಗೆಯಿಂದ |
ಅಹಹಾ ನೊಂದುದು ನುಣ್ಮೊಗದಂದ || ೪ ||

ಇಳೆಯೆಂಬಿನಿಯಳಗಿರಿ ಗುರುಕುಚದಾ |
ತೊಳಗುವ ಕುಂಕುಮ ಪಂಕದ ಸೊಗದಾ ||
ಕಳೆಗುಂದಿತು ಕಂದಿತು ಕರಗಿದುದು |
ಬಳೆದಾ ಜವ್ವನ ಮಾಸಿದುದು ಮುಗಿದು || ೫ ||

ದಿನವೆಂಬೀ ನಾಟಕದಂಕದೊಳು |
ದಿನಮಣಿ ನೀನಾಡುವ ಮುಂದಾಳು ||

ಸನಿಹದ ಸಂಜೆಯು ಜವನಿಕೆ ಯೆಡೆಯಾ ।
ಘನಮೃತ್ಯುವ ಕಾಣದೆ ಬಳಲಿದೆಯಾ ॥ ೬ ॥

ನಿನ್ನೀ ಬಾಳೊಂದೇ ದಿನಕಾಯ್ತು ।
ಕಣ್ಣಿಗೆ ಕಾಣಿಸಿ ಕಾಣದೆ ಹೋಯ್ತು ॥
ನನ್ನಿಗೆ ಪುಸಿಯಾ ಪರದೆಯು ಮುಸುಕು ।
ಬೆನ್ನಿನ ಮರಣವೆ ಜೀವಕೆ ಮುಸುಕು ॥ ೭ ॥

ಎಳನರಯುದೆ ಕತ್ತಲೆಯೊಡನಾಟ ।
ಬಲಿತಾ ಜವ್ವನದೊಳ್ ತಿರುಗಾಟ ॥
ತಿಳಿವಿಂಗಾವುದು ಸಮಯದ ನಿಯಮ ।
ಗಳಿಯಿಸೆ ಪರೆಯುಮುದವಿನನಿಯಮ ॥ ೮ ॥

ಪರಿಕಿಸೆ ಕತ್ತಲೆ ಮರಣಂ ನಿನಗೆ ।
ಮರಣಂ ಪರಿಕಿಸೆ ಕತ್ತಲೆಯೆಮಗೆ ॥
ಇರವೆಂಬುದೆ ಸಾವಿಂಗೊಡನಾಡಿ ।
ಸಿರಿದೇಂ ಸಾವಿದವಿಂಗೊಡನಾಡಿ ॥ ೯ ॥

ರವಿಯೊಬ್ಬನೇ ಮುಳುಗಿದನೇ ಜಗದಿಂ ।
ರವಿಗಳನೇಕರ್ ಕಳೆದರ್ ದಿವದಿಂ ॥
ತವಕದೆ ಭೋಗಿಸುತೇಳ್ಗೆಯ ಸೊಗಸ ।
ಸವಿದರ್ ಕತ್ತಲೆಯುದರದಗರಸ ॥ ೧೦ ॥

ಸಂಜೆಯುದೆಲ್ಲರನಂಜಿಸುತಿಹುದು |
ಮುಂಜೆರಗಂಪಿಡಿದೆಳೆಯುತ್ತಿಹುದು ||
ಮಾಂಜಲ್ ದಿನದಾ ಜೀವನದಿಂಪು |
ಸಂಜೆಯು ರಾಜನ ಸಜಾವ ಕೆಂಪು || ೧೧ || ಪೆಂ/

ಶಂಕರಭಟ್ಟ ಕಡಂಗೋಡ್ಲು

# ಮು ಗು ಳೇ !

(ಕಂದ ಧ್ರಿಪದಿ.)

ಹುರುಳಸೊಡೆ ನುಡಿದು ಹೇಳಲು ಬಗೆಯುತ ಬಿಗಿಯಾಗಿ ಮುಗಿದ ತುಟಿಗಳ ಹಾಗೆ ||
ಬಿರಗಾಗಿ ಹೊರಗೆ ಬಂದಿಹೆ ಜಗದೊಳಗಾ ಯಾವ ಕಂಪ ಸೂಸಲು ಮುಗುಳೇ! || ೧ ||

ಮುಗುಳೇನು ಬಗೆದೆ ಮುಗಳೇ? ತಡೆಯುವಿರೌ ಮುಗಿಯು ಬಂತು ಭಂಗುರ ಭವವು! ||
ಉಗುಳುಗುಳು - ಉಗುಳ ಗಂಧವ ಬಂಧವ ಬೀಸಾಡಿ ಬಾಡು ಮರಣವ ಕೂಡಿ || ೨ ||

ಗಂಧವ ಬೀರಲು ಈ ಭವ - ಬಂಧನವಂ ಪೊಂದಿ ಬಂದ ಚಂದಿರೆ! ಕೇಳೌ ||

ಬಂಧದ ದೇಹವನಪ್ಪುತ ಗಂಧವನೇ ಕೊಂದು ಬಿಡುವಿ -
ಏನಿದು ಮರುಳು? || ೩ ||

ನುಡಿಯಂತೆ ನುಡಿಯು ನಡಿಗೆಯು ಬೆಡಗಿನ ಹಾಗಿರುವದವ್ವ!
ರೂಪಿನ ರೂಪು ||

ಹುರುಳ ತಿರುಳಂತೆಯಿಹುದೀ - ಯಿರುಳನು ಹಗಲನ್ನು ಏಕ್ಕ
ಕಂಪಿನ ಪೆಂಪು || ೪ ||

ಅಂಬಿಕಾತನಯದತ್ತ, ಧಾರವಾಡ

## ಎದೆಮುಗುಳೇ !

(ವಾರ್ಧಿಕ ದೀರ್ಘ ದ್ವಿಪದಿ.)

ಮೈಮರೆಯೆ, ಮನವರಿಯೆ, ಮಡಿಮಾತು ಸೆರೆಯೆ, ಏಗೆ
ಮೆರೆಯೆ, ನನ್ನೊಡನೆ ಬೆರೆಯೆ ||

ಮೈಮನಸು ಮಾತುಗಳು ಸೊಬಗು ಸೂರಿದವಲ್ಲ! - ಎದೆ
ಮುಗುಳ ಮಗಳ ಪಡೆಯೆ || ೧ ||

ನನ್ನ ಯೆದೆಮುಗುಳೆ! ಕಿರುಮಗಳೆ! ಮುದ್ದಿನ ಮುದ್ದೆ!
ಮುತ್ತುಗಳ ಮುತ್ತೆ! ಬಾ! ಬಾ! ||

ಆನಂದ ನಂದಿನಿಯೆ! ನಂದನದ ಚಂದ! ಹೃದಯೇಂದೀವ
ರೇಂದಿರೇ! ಬಾ! || ೨ ||

ನನ್ನ ಮುನ್ನವೆ ನೀನು! ನನ್ನ ಮನೆಮಗಳಾಗಿ ಮುನ್ನೀರ
ಮಗಳೆ! ಬಂದೆ ||
ನನ್ನ ನನ್ನಿಯು ನೀನು! ನನ್ನ ನನ್ನಿಯು ನೀನು! ನನ್ನ ಮನ
ದನ್ನೆಯಾದೆ! || ೩ ||

ಇಂದು ನನ್ನಯ ಮನದ ಬಾಂದಳದಿ ಬಂದಂದೆ - ಮರುಳೆ!
ಬಲುಮರುಳೆ! ಇರುಳೆ! ||
ಬಂದೆ ಅಂದದ ಪೂರ್ಣಪೂರ್ಣಿಮೆಯ ಚಂದ್ರಿಕೆಯು - ಕಣ್ಣು
ಕಣ್ಣಾಗಿ ಅರಳೆ! || ೪ ||

**ರಾಮಚಂದ್ರ, ಧಾರವಾಡ.**

---

## ಆತ್ಮನ ಅಮರತ್ವ.

**(ವಾರ್ಧಿಕ ಷಟ್ಪದಿ.)**

ಜಗದೊಳಗೆ ಬಾಳುತಿರುವಂಥ ಜೀವಿಗಳ ಬಲು |
ಮೃದುವಾದ ಹೃದಯದೊಳು ಬಿಗಿಯಾಗಿ ನಟ್ಟಿರುವ |
ಸಕಲ ದುಃಖದ ಸಾರವನು ಹೀರಿ ನಿಂತಿರುವೆ -
ನನಗೆಲ್ಲಿ ದುಃಖವಿನ್ನು? ||
ಸಕಲ ಜೀವಿಗಳ ದೇಹಗಳೊಳಗೆ ಅಡಗಿಕೊಂ |
ಡಿರುವಂಥ ರೋಗಗಳ ಬೀಜವನ್ನರಿದರಿದು |

ಮರಣವೆಂಬುವ ತುಪ್ಪದೊಳು ಕಲಸಿ ಕುಡಿದಿರುವೆ -
ನನಗೆಲ್ಲಿ ಮರಣವಿನ್ನು? ॥ ೧ ॥

ಧಗಿಧಗಿಸಿ ಮುಗಿಲೊಳಗೆ ಜಿಗಿಯುತಿರುವಂಥ ಕಾ - |
ಡ್ಗಿಚ್ಚಿನೊಳು ಕಡಿಕಡಿದು ನನ್ನ ಕೈಕಾಲ್ಗಳನು |
ತೂರಿದರೆ ನೋಡುವೆನು ನಿಂತು ನನ್ನಯ ದೇಹ
ವಳಿಗಾಲವನ್ನು ನಗುತ! ॥
ಸಳಸಳನೆ ಎಸರಿಟ್ಟ ವಿಷದೆಣ್ಣೆಯಿಂ ತುಂಬಿ - |
ದಂಥ ಕೊಪ್ಪರಿಗೆಯಲಿ ಹಾಕಿ ಕರಿದರೆ ನಾನು |
ಮೋದದಿಂ ಪಾಡುವೆನು ನನ್ನ ತಳಮಳಿಸುವಂ
ತಹ ದೇಹದಾಟವನ್ನು! ॥ ೨ ॥

ಹಚ್ಚನ್ನ ಹತ್ತು ಸಾವಿರ ಹಾವುಗಳ ವಿಷವ |
ಸಣ್ಣನ್ನ ಬಟ್ಟಲಲಿ ಹಾಕಿ ಕೊಟ್ಟರೆ ನನಗೆ |
ಕುಡಿದು ಬಿಡುವೆನು ಗುಟುಕಿನೊಳು ಹಚ್ಚಿ ತುಟಿಗಳನು
ಪೀಯೂಷದೊಳು ಮಮತೆಯಿಂದ ॥
ಭಯವೆಂದರೇನು? ಮರಣವು ಯಾವ ತೊಪ್ಪಲವು? |
ನರಿಯಾಗಿ ಕೊಲೆಗಡಕರಿಂದ ಹಿಡಿದಿರುವ ಬಲು |
ಚೂಪಾದ ಚೂರಿಯೊಳು, ಯುವತಿಯರ ಹೃದಯದೊಳು
ತುಂಬಿಕೊಂಡಿರುವೆ ನಾನು! ॥ ೩ ॥

**(ಗೆಳೆಯರ ಗುಂಪಿನಿಂದ.)** ಸೀತಾತನಯ, ಧಾರವಾಡ.

# ಎಂದಿಗೆ ಮುಕ್ತಿ.

(ಕುಸುಮ ಷಟ್ಪದಿ.)

ತಲೆಯೊಳಗೆ ತುಂಬಿರುವ |
ಹಲವು ವಸ್ತುಗಳೆಲ್ಲ |
ಕೆಲಸಕ್ಕೆ ಬಾರದೆಂದೊಗೆಯುವಾಗ ||
ಬಲವಾಗಿ ಕೈಗಳಿಂ |
ದಲುಗಿಸದೆ ಬಿಗಿದಿರುವ |
ಕಲುಷಪೂರಿತ ಧನವನೆಸೆಯುವಾಗ || ೧ ||

ಪರರ ಹಸಿವನೆ ಕಂಡು |
ಕೊರಕೊರಗಿ ಮನದಲ್ಲಿ |
ಕರಕನ್ನವುಣಲು ತಾ ಬಯಸುವಾಗ ||
ಶಿರವಿಡಲು ನೆಲವಿಲ್ಲ |
ದಿರುವವರ ಗತಿ ಕಂಡು |
ಮರುಗುತ್ತೆ ಸುಖವಸತಿ ತೊರೆಯುವಾಗ || ೨ ||

ಒಂದೂಟವಿಲ್ಲದಲೆ |
ನೊಂದಿ ಬಲು ಸಾಯುವರು |
ಎಂದು ತಾ ಮನದಲ್ಲಿ ಕರಗುವಾಗ ||

ಇಂದಿನಾ ದಿನದಿಂದೆ ಒಂದೂಟವೇ ಮಾಡಿ |
ಮುಂದಿ ಕಷ್ಟವ ಭಾಗ ಮಾಡುವಾಗ ॥ ೩ ॥

ನಾನು ತಾನೆಂಬುದನು |
ಕನಸಿನಲು ಮರೆಯುತಲಿ |
ಮಾನವರ, ಪ್ರಾಣಗಳ, ಪ್ರೀತಿಪಾಗ ॥
ಅನ್ನಪಾನಗಳೀವ |
ಚಿನುಮಯಾಕಾರನೇ |
ಮಾನವಾಕೃತಿಯೊಂದು ತಿಳಿಯುವಾಗ ॥ ೪ ॥

"ಚಾತಕ"

## ನನ್ನ ಬಯಕೆ.

(ಭಾಮಿನಿ.)

ಮುತ್ತು ಹವಳಗಳನ್ನು ಬಯಸೆನು |
ಸತ್ತಿಗೆಯ ಸಡಗರವನೊಲ್ಲೆನು ॥
ಸುತ್ತು ನೆಲದಲಿ ನೆಲಸಿ ಮರೆಯುವ |
॥ ಜಸವ ಪ್ರೇಮಿಸೆನು ॥ ೧ ॥
ಮುತ್ತೆ ಮುಗಿಲಿನ ಕಪ್ಪಿನೆಸಕದ |
ನೊತ್ತದೊಳು ಮುಸುಕಾಗಿ ಮುಳುಗುವ ॥

ಮು/

ಚಿತ್ತ ಸೆಳೆಯುವ ಚಿನ್ನ ನೋಡದ |
|| ಸೊಬಗಿನಂದದಲಿ || ೨ ||

ಮನವ ಮೋಹಿಸಿ ಕನಸಿನಂದದಿ |
ನೆನಸುವಾಗಲೆ ಮಾಯವಾಗುವ ||
ಮನುಜನೊಲವಿನ ಪೊಳ್ಳು ಹಂಬಲ |
|| ಎನಗೆ ಬೇಡೊಡೆಯಾ || ೩ ||

ನನ್ನ ಬಯಕೆಯು ಭಕ್ತಿ ಭಾವದಿ |
ನಿನ್ನ ಅಡಿಯಲಿ ಅರಿಕೆ ಮಾಡುವೆ ||
'ನಿನ್ನ ಬೆಸನವ ಗೈವುದೆನ್ನಯ |
|| ಹಿರಿಯ ಗುರಿಯಯ್ಯ' || ೪ ||

ನಿನ್ನ ನೋಟದ ಒಲವನುಣ್ಣುವ |
ನಿನ್ನ ಅಡಿಗಳ ಹುಡಿಯಲಾಡುವ |
ನಿನ್ನ ಮಡಿಲಲಿ ಮಲಗಿ ಸೊಗಸುವ |
|| ಸ್ವಪನೆಳಸುವೆನು || ೫ ||

ಗುಟ್ಟು ತಿಳಿಯದು ವಿಶ್ವಲೀಲೆಯು |
ಹುಟ್ಟು - ಸಾವುಗಳಂತ ಹತ್ತದು ||
ಬಿಟ್ಟಿಸೆತ್ತಲು ಹರಡಿದೊಗಟವ |
|| ಒಟ್ಟು ಏನಿಹುದು? || ೬ ||

ಸಾಧು - ಶರಣರ ನುಡಿಯುಸೋದಿದೆ |
ಬೋಧವೇನೂ ಬೆಳಗಲಿಲ್ಲವು ||
ಶೋಧದಲ್ಲಿಯೆ ಬುದ್ಧಿ ಬಳಲಿತು |
|| ನರನು ಕಂಗಳನು || ೭ ||

ನನ್ನ ಜೀವನು ಬೆಳಕ ಬೇಡುತ |
ತನ್ನ ಊರಿಗೆ ಕೊರಗುತಿರುವನು ||
ನಿನ್ನ ಎಡೆಯುಲಿ ಬರಲು ಬಯುಸಿಹ |
|| ನೊಂದ ಕಂದನೊಲು || ೮ ||

ಮುಳಲ ಮೇಲಣ ಬರಹದಂದದಿ |
ಒಳಗೆ ಸಂಕಲ್ಪಗಳು ಮೂಡುತ ||
ಮುಳುಗಿ ಅಳಿದರು ಎನ್ನ ಮನ್ನಿಸಿ ||
|| ಕೃಯು ನೀಡಯ್ಯಾ || ೯ ||

ಕೊಣ್ಣೂರ ಹಣಮಂತರಾಯರು

## ಬರಿದೆ.

(ಮಾರಾ ತನಮಾಂ ಮನಮಾಂ ಭರಿಯೋಚೇ
ಥರಿಯೋಚೇ - ಎಂಬ ಗುಜರಾತಿ ಹಾಡಿನಂತೆ )

ಸೂರ್ಯಚಂದ್ರರ ಪಡಿಗಲ್ಲಂಗಡಿಗ ಗಡಾ ನಿನಗೆಲುವತಕ್ಕಡಿ ಇನ್ನು
[ಬೇಕೇ!

ಗಗನಗೋಪಾಲನೆ ಆವಿಯಾವ ನೀ ತಿಂಡಲು ಹಸಿವಳೆ ಆಕೆ? |
ಜೀವನ ಕೊಳಲನೂದುವ ದೇವಾ - ಈ ಕಣ್ಣೀರ ಕಿಣ್ಣವೇಕೆ?
ತಿರ್ರನೆ ತಿರೆಯಾ ಜೊಗರಿಯಾಟಕೀ ಹಮ್ಮಿನ ಹುರಿಹಗ್ಗ ಸಾಕೇ || ೧ ||

ಘನ್ನನೆನಿತ್ತೊ ನಾ ಹೊನ್ನಕಂಬಳಕಾಗದಿಸ್ನೀ ಎದೆಯಿಂದ ಪೋಂಟಿ [ಮುಳ್ಳನ್ನ
ಕನಸಿಗೆ ಕಾಯುವ ಬಯಕೆಯು ಬಯಲಲಿ ಮುತ್ತು ಬಿತ್ತನೆಯಾತ್ತಿಹನ್ನ |
ಬಾಷ್ಪಬಂಧುವೆ ಸ್ನೇಹಸಿಂಧುವೆ - ಮುತ್ತು ಮುತ್ತಿಂದ ಮೊಳೆವುದೆನ್ನ?
ಲಾವಣ್ಯ ವಾಪಿಗೆ ಸೋಲಿದಾನೆಯಾ ದೂಪೆಗೊಂದೆವೆಯು ನೀಗೆನ್ನ || ೨ ||

ಮಂಜೇಶ್ವರ — ಗೋವಿಂದ ಪೈ.

[ಎಲುವ ತಕ್ಕಡಿ — ಎಲುಬಿನ ತ್ರಾಸು, ಅಂದರೆ ಈ ದೇಹವು. ಆವಿಯಾವ — ಆವಿಗಿಟ್ಟು ಮಾಡಿದ ಮಣ್ಣಿನ ದನ. ಮುತ್ತು — ಮೌಕ್ತಿಕ; ಪ್ರೇಮ: ಮುಪ್ಪು.]

# ಮಹಾತ್ಮರ ಉಪವಾಸ.

## (ವೀರ ಚೌಪದಿ.)

(ಕಳೆದ ರಕ್ತಾಕ್ಷಿ ಸಂ। ದ ಭಾದ್ರಪದ ಬ। ೫ (೧೮-೯-೨೪) ಯಿಂದ ಆಶ್ವೀಜ ಶು। ೧೧ (೮-೧೦-೨೪) ಯ ವರೆಗೆ ಢಿಲ್ಲಿಯಲ್ಲಿ ಮಹಾತ್ಮರು ಮಾಡಿದ ೨೧ ದಿನಗಳ **ಉಪವಾಸ.**)

**ಮಂಜಿನೇಕಾಂತದಲಿ ಶ್ರೀ ಹರಿಯ ಹಂಬಲಿಸಿ,**
**ಹೃದಯ ಕ್ಷುಧೆಯನ್ನಾಡುತೊಡಲ ಹಸಿವಿಂದಂ,**
**ಮನದ ರಂಭೆಯ ಗೆದ್ದು, ಶುಕನಾತನನ್ನೊಲಿಸಿ,**
**ಭಕ್ತಿಗಂಗೆಯ ಭಾರತದ ತೃಷೆಗೆ ತಂದಂ** ॥ ೧ ॥

**ಉರುವೇಲೆಯರಳಿಯಡಿಯಲಿ ಚಿರಂ ಹಸಿದರೆದು,**
**ಮಾರನಂ ಮುರಿದು, ಸಂಬುದ್ಧನೆಮಗಗ್ಗಂ**
**ನಿಬ್ಬಾಣವೊಂದೆ, ತಣ್ಹೆಯರಣ್ಯಮಂ ತರಿದು,**
**ತೋರ್ದನರಿಯಟ್ಠಂಗಿಕದ ಧಮ್ಮಮಗ್ಗಂ** ॥ ೨ ॥

ಕಟ್ಟಿಳೆಯ ಕುರುಡಿನಲಿ ಬೆಳಕಿನೊಡೆಯನ ನೋಂಪು
ಪೆಮ್ಮೆದೆಯ ಹರೆಯ ಹೆರೆದೆಮ್ಮೊಳಗೆ ಪಿಸದಾ
ನೆಲಸಿರುವ ಸ್ವಾರಾಜ್ಯನೆಮಗೆ ತೋರಿಸೆ, ಯೋಗ
ಯೊಂದರ್ಸಿನ ನನದಿ ನಲವತ್ತು ದಿನ ಹಸಿದಂ ॥ ೩ ॥

ಅರಬ್ಬರೆದೆಯುರಪಿಂದ ನೊಂದು, ನವಜೀವನವ
ನುಪವಾಸದಿಂದರಸಿ ಹಿರೆಯ ಕಂದರಿಯಿಂ,
ದೇವರಲ್ಲದೆ ದೇವರಿಲ್ಲೆಮ್ಮ ಕಾವನವ
ನೆಂಬ ಸತ್ಯವ ಕಂಡನದನರಬರೆದೆಯಂ ॥ ೯ ॥

ಗುರುವೆ, ಇಪ್ಪತ್ತೊಂದು ದಿನದುಪೋಷ್ಯದ ಗ್ರೀಷ್ಮ
ದಲಿ, ಧಿಲ್ಲಯಿಂ ಚೆಲ್ಲಿದೀ ಪ್ರೇಮಬೀಜಂ
ಸೌಂದರ್ಯ ಶಾಂತಿಯಿಂ ತುಂಬಿ, ಭಾರತದೂಷ್ಮ
ಹಸುರಿಸಲಿ! ಕಾಲನಿದನಾವಗಂ ಮಾಜಂ! ॥ ೧೦ ॥

ಮಂಜೇಶ್ವರ. ಗೋವಿಂದ ಪೈ.

[ಮಂಜಿನ ಹಿಮಾಲಯದ. ಶುಕಯೋಗಿಯು ಪರೀಕ್ಷಿದ್ರಾಯನಿಗೆ ಶ್ರೀಮದ್ಭಾಗವತವನ್ನು ಹೇಳುವ ದ್ವಾರಾ ಈ ಭಾರತಭೂಮಿಯಲ್ಲಿ ಭಕ್ತಿಧರ್ಮವನ್ನು ಬೋಧಿಸಿದನು.

ಉರುವೇಲೆಯೆಂಬುದು ಗಯೆಯಿಂದ ಕೊಂಚ ದೂರದಲ್ಲಿರುವ ಒಂದು ಹಳ್ಳಿ; ಅಲ್ಲಿಯ ಒಂದು ಅಶ್ವತ್ಥವೃಕ್ಷದ ಬುಡದಲ್ಲಿ ಬುದ್ಧನು ತಪಸ್ಸನ್ನು ಮಾಡಿದುದರಿಂದ ಆ ಹಳ್ಳಿಗೆ ಬುದ್ಧಗಯೆಯೆಂದೂ ಆ ಮರಕ್ಕೆ ಬೋಧಿವೃಕ್ಷವೆಂದೂ ಹೆಸರಾಯಿತು. ನಿಬ್ಬಾಣ (ಪಾಲಿಭಾಷೆಯ ಶಬ್ದ) - ನಿರ್ವಾಣ; ಬೌದ್ಧ ಧರ್ಮದ ಮೋಕ್ಷ. ತಣ್ಹೆ (ಪಾಲಿ) - ತೃಷ್ಣೆ, ವಿಷಯಲಾಲಸೆ. "ಅರಿಯೋ ಅಟ್ಠಂಗಿಕೋ ಧಮ್ಮಮಗ್ಗೋ" ಎಂಬುದು ಬುದ್ಧನು ಈ ಸಂಸಾರದಿಂದ ನಾವು ನಿರ್ವಾಣವನ್ನು ಸೇರಲು ಕಂಡು ಹಿಡಿದ ಮಾರ್ಗದ ಪಾಲಿಭಾಷೆಯಲ್ಲಿಯ ಹೆಸರು. ಇದು ಸಂಸ್ಕೃತ

ದಲ್ಲಿ "ಆರ್ಯಃ ಅಷ್ಟಾಂಗಿಕಃ ಧರ್ಮಮಾರ್ಗಃ" ಅಂದರೆ ಮಾನ್ಯವಾದ ಧರ್ಮದ ಎಂಟು ಬಗೆಯ ಹಾದಿ. (The noble eight-fold path.)

ಬೆಳಕಿನೊಡೆಯ - ಪರಲೋಕದಲ್ಲಿರುವ ತಂದೆ, ದೇವರು. ಪರೆ - ಪರೆ, ಕಣ್ಣಿಗೆ ರೋಗದಿಂದ ಇಳಿಯುವ ತಿಮಿರ. ಸ್ವಾರಾಜ್ಯ - (ಸ್ವರ್ ರಾಜ್ಯ) - ದೇವರ ರಾಜ್ಯ. ಯೋರ್ದನ್ ಎಂಬುದು ಯರೂಸಲೇಮಿನ ಬಳಿಯ ಒಂದು ಹೊಳೆ.

ಅರಬರ (ಅರಬೀಯರ) - ಎದೆಯ ಅರಬು (ಶುಷ್ಕತೆ, ಅಜ್ಞಾನ.) ಹಿರಾ - ಅರಬಸ್ಥಾನದಲ್ಲಿ ಮಕ್ಕದ ಸಮೀಪದಲ್ಲಿರುವ ಒಂದು ಗುಡ್ಡ - ಇದರ ಕಂದರಿ (ಗುಹೆ)ಯಲ್ಲಿ ಮಹಮ್ಮದನು ಧ್ಯಾನಿಸುತ್ತಿದ್ದನು.]

# ಮ ಹಾ ವ್ರ ತ .

## (Sonnet.)

### (ಮಹಾತ್ಮಾ ಗಾಂಧಿಯವರನ್ನುದ್ದೇಶಿಸಿ.)

ತಟ್ಟನೆ ದಧೀಚಿ ಸುರಪಿಗೆ ನೀಗಿದಂ ಹುರಿಯ,
ಖಗವ ಶಿಬಿ ಪೊರೆದಂ ಸ್ವಮಾಂಸದೆಣೆದಡೆಯಿಂ,
ಶಿಖಿಕೇತನಂ ಪಡೆದನೆರೆವರಂ ಪಿಕ್ಕರೆಯ,
ನೀಡಿದಂ ನೀಡಕಾಜಾಬಾಲ ಜಡೆಯಂ, |
ಕುರಿಯುಳಿಯುವ ಬೆಸಸಿ ಬುದ್ಧಂ ಮುಖವ ಮುಗಿಸಿದಂ,
ಯೇಸು ಪರರಘವ ಸಲಿಸಿಡನೊಡಲ ತೆತ್ತು,

ತೇಗನೆದೆನೆತ್ತರಿಂ ಸಿಕ್ಖರಂ ಏಗಿಸಿದಂ,
ಮೇವಾಡ ಕಾದಳಣುಗನ ಪನ್ನೆಯಿತ್ತು. ॥
ಬಂಧುವಾರೆನಗೆಂದ ಧರ್ಮಸುತನೇಂ ನಿಜಂ
ತಾನೀ ಕುಟುಂಬಿಕನ ಹಿಂಸೆಯೊಂದೊರೆಯಂ?
ನಿನ್ನ ತ್ಯಾಗಾಹಿಂಸೆಯಿಬ್ಬಗಲಿನೀ ಧ್ವಜಂ
ಶಾಂತಿ ಹೊದಿಸಿಳೆಗೀಗು ನೆಣಸವುರೆಯು
ನ್ನೆಂದು ನಿನಗಿಟ್ಟನೇ ತುಂಬಲಾ ಎಡೆಯಂ?
ಪ್ರೇಮದಂಶವನಾಂತೆದೆಯ! ನಮಿಪೆ ನಡಿಯಂ ||---||

ಮಂಜೇಶ್ವರ,
೨೬-೯-೧೯೩೫.

ಗೋವಿಂದ ಪೈ.

[ಹುರಿ = ಬೆನ್ನೆಲುಬು. ದಡೆ = ತ್ರಾಸು, ಅಥವಾ ತೂಕ. ಶಿಖಿಕೇತನ = ಮಯೂರಧ್ವಜ. ಮಿಕ್ಕರೆಯ = (ಶ್ರೀ ಕೃಷ್ಣನಿಗೆ ತನ್ನ ದೇಹದಿಂದ ಅರ್ಧ ಪಾಲನ್ನು ಕೊಟ್ಟು) ಉಳಿದ ಅರ್ಧ ಪಾಲನ್ನು. ಉಳಿವು = ಉಳಿಸುವಿಕೆ. ಮಖ = ಮಗಧ ದೇಶದ ಅರಸನಾದ ಬಿಂಬಿಸಾರನು ಪ್ರಾರಂಬಿಸಿದ ಅಜಮೇಧ-(ಇದನ್ನು ಆ ಅರಸನಿಗೆ ಅಹಿಂಸೆಯನ್ನು ಬೋಧಿಸಿ ಬುದ್ಧನು ನಿಲ್ಲಿಸಿದನು.) ತೇಗ್ ಅಥವಾ ತೇಗ್ ಬಹದೂರ್ - ಸಿಕ್ಕರ ಒಂಭತ್ತನೆಯ ಗುರುವು - ಈತನನ್ನು ಔರಂಗಜೇಬನು ಕೊಲ್ಲಿಸಿದಂದಿನಿಂದ ಸಿಕ್ಕ ಧರ್ಮವು ಹೆಚ್ಚಿನ ವೃದ್ಧಿ ಹೊಂದಿತು. ಪನ್ನೆ - ವೀರಧಾತ್ರಿ ಪನ್ನೆ (ಆರ್ಯಕೀರ್ತಿ - ೧ನೇ ಭಾಗ ನೋಡು) — ಮೇವಾಡದ (ರಾಜಪುತಾನದಲ್ಲಿಯ ಚಿತೋರ್ ರಾಜ್ಯದ) ರಾಣಾ ಉದಯಸಿಂಹನು ಚಿಕ್ಕ

ಕೂಸಾಗಿದ್ದಾಗ ಆತನನ್ನು ಕೊಲ್ಲಲು ಹುಡುಕಿಬಂದವರಿಗೆ ಈಕೆಯು ಅದೇ ಪ್ರಾಯದ ತನ್ನ ಮಗನನ್ನು ತೋರಿಸಿ ಚಿತೋರ್ ರಾಜವಂಶವನ್ನು ಉಳಿಸಿದಳು.

"ಸತ್ಯಂ ಮಾತಾ ಪಿತಾ ಜ್ಞಾನಂ ಧರ್ಮೋ ಭ್ರಾತಾ ದಯಾ ಸಖಾ । ಶಾಂತಿಃ ಪತ್ನೀ ಕ್ಷಮಾ ಸೂನುಃ ಷಡೈತೇ ಮಮ ಬಾಂಧವಾಃ" - ಎಂಬ ಧರ್ಮರಾಯನ ಈ ವಚನವು ಭಾರತದ ವನಪರ್ವದಲ್ಲಿದೆ. ಈ ಬಂಧುವರ್ಗದಲ್ಲಿ ತ್ಯಾಗ ಮತ್ತು ಅಹಿಂಸೆಯು ಪಾಪಿ ಹೇಳಿಲ್ಲ.

ಇಬ್ಬಗಲಿಸೀ ಧ್ವಜಂ - ಮಹಾತ್ಮಾ ಗಾಂಧಿಯವರ ಜಗತ್ಸೇವೆಯ ಧ್ವಜದ ಪಟಕ್ಕೆ ತ್ಯಾಗವೊಂದು ಬಗಲು, ಅಹಿಂಸೆಯಿನ್ನೊಂದು ಬಗಲು, ಮರೆ = ಆಶ್ರಯಃ ಮರೆತುಬಿಡುಪಿಕೆ. ನಿನ್ನ ಈ ಧ್ವಜಪಟದ ಪ್ರೇಮವೆಂಬ ದಂಡವನ್ನು ಕೋಲನ್ನು) ನಿನ್ನ ಹೃದಯದಲ್ಲಿ ನೀನು ನೆಟ್ಟುಕೊಂಡಿರುವೆ; ಈ ನಿನ್ನ ಜಗತ್ಸೇವಾರ್ಥವಾಗಿ ಶಿಕ್ಷೆಯನ್ನು ಸ್ವೀಕರಿಸಿದ ಹೃದಯವುಳ್ಳವನು.]

---

# ಧ್ವಜಗೀತೆ.

(ಮಾತೃಭೂಮಿ ಜನನಿ ನಿನ್ನ--ಎಂಬಂತೆ.)

ಮೆರೆಯಲೆಮ್ಮ ರಾಷ್ಟ್ರಧ್ವಜವು ಆತ್ಮದಾ ಜಯಧ್ವಜ |
ಮೆರೆಯಲೆಮ್ಮ ದೇಶವಾನ ವಿಜಯವಾರ್ತಾ ವಾಹಕ ||
ನಡೆಯಲೆಮ್ಮ ಆತ್ಮಬಲಿಯು ನಿನ್ನ ತಲದಿ ಪ್ರತ್ಯಹ |
ಅಡಗಿ ಇರಲಿ ನಿನ್ನ ಗೌರವದೊಳು ನಮ್ಮ ಧೀರತಾ || ೧ ||

ಮೆರೆಯು ತ್ರಿಗುಣ ರೂಪದಿಂದ ಧರೆಯುವಾಸ ಪಸರಿಸುತಾ ||
ಹರಿಸಿ ಭೇದ ಐಕ್ಯವನ್ನು ಸ್ಥಿರದಿ ತೋರಿ ನೆಲಸುತಾ || ೨ ||
ರಕ್ತದೊಳಗೆ ಹಿಂದುವೂ ಹರಿತ್ತಿನೊಳ್ ಮುಹಮ್ಮದಿ ||
ಶ್ವೇತದೊಳಗೆ ಇತರರಾಗಿ ನಿತ್ಯಸ್ನೇಹ ಸೂಚಿಸು || ೩ ||
ಗಗನ ಮೇಘ ಮಗನರಾತ್ರಿ ತಿಮಿರದಿಂ ಭಯಂಕರ ||
ಮಿಗೆ ಪ್ರಚಂಡ ವಾಯು ಬೀಸಿ ಇರಲಿ ಬಹುವಿಪತ್ಕರ || ೪ ||
ತನು ಮನ ಧನದಿಂದ ನಿನ್ನ ಘನತೆಯನ್ನು ಹಾಡುತ ||
ಅನುಸರಿಸುತ ಬಂದು ಯುದ್ಧ ಮಾಡಿ ನಿನ್ನ ನೆತ್ತುತಾ || ೫ ||
ಪ್ರಕಟಿಸು ನೀವು ಉಚ್ಚ ಸ್ವರದಿ ಲೋಕದೊಳ್ ಸ್ವತಂತ್ರತಾ || .
ಸಕಲರೊಳಗೆ ಇರಿಸು ನೀವು ಚರಕಸುಖ ಸ್ವಾಧೀನತಾ || ೬ ||
ಶ್ವೇತ ಹರಿದ್ರಕ್ತ ತ್ರಿಗುಣ ನಿತ್ಯ ಐಕ್ಯದಿಂ ಜಯ ||
ಮತ್ತೆ ಚರಕ ಜನತೆಯೊಳಗೆ ನಿತ್ಯ ಸತ್ಯ ಸುಸಮಯ || ೭ ||

ತಾ. ೧೮--೭--೩೩. ಮೂಲ್ಕಿ ವಾಮನಕುಡುವ.

## ವಿ ರ ಹ .

(ವಾರ್ಧಿಕ ದೀರ್ಘ ದ್ವಿಪದಿ)

ಧನ್ಯನಿಹ ಸುಖಿ ವಸಂತನು ಬಂದು ಸೌಗಂಧವನ್ನಿಳೆಯೊಳಗೆ
ಪಸರಿಸಿ 'ಇನ್ನೆನ್ನ ಮಾಧುರ್ಯವುಂ ಸೇವಿಸುತ ನೋಡು ಸೌಂದ

ರ್ಯವನ್ನೀಕ್ಷಿಸಿ, ‖ ತನ್ನಾತ್ಮಸುಖದಿಂದ ಆಲಿಂಗಿಸುತ ‘ಮುಗ್ಧೆ! ಇನ್ನೇಕೆ? ನೀ ದುಃಖಿನಿ’ | ಎನ್ನುತಲಿ ಪ್ರಣಯಮಂ ಬೆಳಸಲ್ಕೆ ಯತ್ನ ಮಂ ಮಾಡುತಿರಲಾ ಧಾರುಣೀ ‖ ೧ ‖

ಸೊಗದ ಸಂಭ್ರಮವನ್ನು ಹಸಿವ ನಯನಗಳಿಂದ ದಿಟ್ಟಿಸುತ ಲಂತರ್ಯದೊಳ್ | ಭೋಗಿಸುವೆನೆಂದು ಸ್ವೀಕರಿಸಿ ಆನಂದಿಸಲು ತನ್ನಾತ್ಮ ಸುಖದಿಚ್ಛೆಯೊಳ್ ‖ ಬೇಗನೆದ್ದಿತು ಹೃದಯದ ತಲತಲದಿಂ ದೊಂದು ಸಂತಾಪದ ಜ್ವಾಲೆಯು | ಬೇಗ ಬಿಸುಟಳು ಮೋಹಜನಕ ನಾಲಿಂಗನವ--‘ಇಲ್ಲಿಲ್ಲ ತನ್ನಾಶೆಯು; ‖ ೨ ‖

ಎಲ್ಲಿ ಕಾಣುವೆನೆನ್ನ ಅಂತರ್ಯದೊಂದಾಶೆ, ಎಲ್ಲಿಂದಲೀ ಜ್ವಾಲೆ ಯು | ತಲ್ಲಣಿಸಿ ಎನ್ನೆದೆಯ ಮೇಲೇರುತಿದೆ, ಯೆನ್ನ ಮೆಯ್ಯೊಳೇಕೀ ಸ್ವೇದವು? ‖ ಮೆಲ್ಲನೀ ಮೃದುವಾದ ಹೃದಯಮಂ ಸೀಳಿ ದಾರುಣ ವೇದನೆಯ ಕೊಡುವುದು | ಎಲ್ಲಿಯದು ಪಿರಹಸ್ಯ? ಆರೆನ್ನ ಪ್ರಿಯತ ಮನು?’ ಎಂದಿಳೆಯು ಬಿಸುಸುಯ್ದಳು ‖ ೩ ‖

‘ನಿನ್ನ ಪ್ರೇಮದ ಉಸಿರು ಈ ಕೆನ್ನೆಗಳ ಮೇಲೆ ವಹಿಸಿ ಕೆಂಪನು ತಾಳ್ದುವು | ನಿನ್ನ ಕಂಗಳ ಬೆಳಕು ಈ ಹೃದಧ್ರುವಂ ಕಾಸಿ ಎನ್ನಾತ್ಮ ಮಂ ಸೇರಿತು ‖ ನಿನ್ನ ಕರಗಳ ನಿತ್ಯದಾಲಿಂಗನದ ಬಂಧ ಎನ್ನೆದೆಯ ಬಿಗಿದಿರ್ಪುದು | ನಿನ್ನ ಪ್ರಣಯದ ವಚನ ಎನ್ನ ಕಿವಿಗಳ ಸೇರಿ ಆನಂದ ಮಂ ಸೂಸಿತು ‖ ೪ ‖

ನಿನ್ನ ಸಂಸಾರದೊಳ್ ನಿನ್ನ ಗೃಹಿಣಿಯು ನಾನು ನಿನ್ನಲ್ಲಿ ನಾನೀ
ರ್ಪೆನು | ನೀನೆನ್ನ ಭೋಗಿಸುತ, ಪ್ರೀತಿಸುತ, ಶಿಕ್ಷಿಸುತ, ನೀನೆನ್ನ ಚಿರ
ಸ್ವಾಮಿಯು || ನೀನೆನ್ನ ವಸನರೂಪದಿ ಸುತ್ತಿ ಇರುತಿರಲು ಇನ್ನೇಕೆ
ಸಂತಾಪವು? | ಇನ್ನೇಕೆ ನಾನಿನ್ನು ನಿನ್ನ ಕಾಣೆನು? ಎದೆಯೊಳಿನ್ನೇಕೆ
ವಿರಹಾಗ್ನಿಯು? || ೫ ||

ಸಾಧಿಸುವ ಸನ್ಯಾಸಿ ದುಃಖಿಸುವ ಸಂಸಾರಿ ಮೇಣೆದ್ದ ಪಶುಪಕ್ಷಿ
ಗಳ್ | ವೇದನೆಯು 'ಹಾ, ಕಾಂತವನ್ನೆಬ್ಬಿಸುತ ವಿರಹವಾಧವಂ ಧ್ವನಿಸಿ
ರ್ಪರು, || ಮೇದಿನಿಯು ಈ ರೀತಿ ತನ್ನಂತರದಿ ಭಾಸವಾಗುತಿಹ ಉತ್ಪಾ
ತದಿಂ | ರೋದಿಸುತ ತನ್ನೊಡನೆ ಶೋಕಿಸುವ ಪ್ರಿಯತಮನ ವಿರಹ
ದಿಂದರಸಿರ್ಪಳು || ೬ ||

ಮೂಲ್ಕಿ ವಾಮನಕುಡುವ.

---

## ಪ್ರತುಮೆ.

ಸಕ್ಕರೆ ಖರ್ಜೂರ ದ್ರಾಕ್ಷಿ ಪುಟಾಣಿ |
ಮುಕ್ಕಿಹ ಸಿಹಿಸವಿ ದಿನಿಸೆಲ್ಲವೆಲ್ಲ ||
ಸೊಕ್ಕಿದ ಸಿಂಗಿಯ ಹಾಲೊಳು ಕಲಸಿ |
ಅಕ್ಕರ ಮಕ್ಕಳ ಮುದ್ದು ಮಾಡುವರು || ೧ ||

ಪ್ರತುಮಿಯ ಮಾಡುತ ಮಧುತರ ದಿಸಿಸಲಿ |
ಅತಿಶಯ ಮೂರ್ತಿಯ ಮಗುವೆಂಬರಯ್ಯ ||

ಆನೆಯ ದಂತವು ಪಸಿಮೆಯ ಹೊನ್ನು |
ಮಾಣಿಕ ಮುತ್ತು ವೈಡೂರ್ಯವು ನೀಲ ||
ಜಾಣರು ತೇದಿವ ತಿಂಗಳ ಬೆಳಕಲಿ |
ಜಾನದ ಹತ್ತಿಯೊಳದ್ದಿ ತಿದ್ದುವರು || ೨ ||

ಪ್ರತುಮಿಯ ಮಾಡುತ ಮಧುತರ ದಿಸಿಸಲಿ |
ಅತಿಶಯ ಮೂರ್ತಿಯ ಮಗುವೆಂಬರೈಯ್ಯ ||

ನಗುವಿನ ದಾರಕೆ ಪೋಣಿಸಿ ಕಣ್ಬನಿ |
ಸೊಗಸಿನ ಕಂಠಿಗೆ ಬಿಡಿನುಡಿ ಚುಂಬನ ||
ಬಗೆಬಗೆಯಾಟದ ಹವಳಗಳೊತ್ತಲು |
ಚಿಗಿವುದು ಪ್ರತುಮಿಯ ಕೊರಳ ವತ್ತೊತ್ತಿ || ೩ ||

ಪ್ರತುಮಿಯ ಮಾಡುತ ಮಧುತರ ದಿಸಿಸಲಿ |
ಅತಿಶಯ ಮೂರ್ತಿಯ ಮಗುವೆಂಬರೈಯ್ಯ ||

ತಂತ್ರಿಯ ನೆನಹಲಿ ಸಂತರ ಮಕ್ಕಳ |
ಮಂತ್ರದ ರೂಪಕೆ ತಿದ್ದಿಟ್ಟ ನೋಲೆ ||
ಯಂತ್ರಿಗಳೆನಿಸಿ ಸ್ವತಂತ್ರರು ಮಕ್ಕಳು |
ಸಂತರ ಕುಲಸಂತ್ರಾತರಾಗುವರೈ || ೪ ||

ಪ್ರತುಮೆಯು ಮಾಡುತ ಮಧುತರ ದಿನಿಸಲಿ |
ಅತಿಶಯು ಮೂರ್ತಿಯು ಮುಗುವೆಂಬರ್ರೈಯ್ಯ ||

ಶ್ರೀ| ಹೊಯಿಸಳ

---

# ಭಂಡಾರ.

(ಭಾಮಿನಿ.)

ಅರಳಿ ದಳದಳ ಸುರಿಯೆ ರಜಕಣ |
ಹರಿಯೆ ಮಧುರಸ ಮೆರೆಯೆ ದುಂಬಿಯು ||
ತಿರುಳ ಭಾವಕೆ ಹರಿಯೆ ವೀರ್ಯವು |
|| ಗೂಢತರದೊಳಗೆ ||
ಹೊರಗಣಾರ್ಥಿಕ ಸರದಿ ಕಳೆಯಲು |
ಇರದು ಮಧುರಸ ವಿರದು ಶುಭರಜ ||
ವಿರದು ರಂಗಿನ ಪೆಂಪದಾವದು |
|| ಬಲಿಯೆ ಭಂಡಾರ || ೧ ||

ಹೊರಳಿ ಧ್ವಜಪಟ ಸುಳಿದು ಹೊಂಬೆಗೆ |
ಹರಿದು ಹೊಗಳಿಕೆ ಮೊರೆಯೆ ಕವಿಗಳು ||
ಭರತ ಭುವಿಯಲಿ ವೀರ್ಯ ಹರಿಯಿತು |
|| ತಿರುಳಿನಂತರಕೆ ||

ಹೊರಗಣಾರ್ಥಿಕ ಸರದಿ ಕಳೆಯಿತು |
ಇರದೆ ಹೊಂಬೊಗೆಯಿರದೆ ಹೊಗಳಿಕೆ ||
ಸುರುಳಿ ಧ್ವಜಪಟ ಸುರುಟ ಭವಸು॥ |
|| ಬಲಿತು ಭಂಡಾರ || ೨ ||

ನಾಡ ಹೃದಯವು ಸೊರಗಿ ಸುರುಟಿದೆ |
ಆಡುವಾ ಕಳೆಯಿಲ್ಲ ಮೊಗದಲಿ ||
ಸೋಡೆ ನೆಂಬೊಡ ನೆಳಲ ಕಾಣೆನು |
|| ಪೂರ್ವ ಶುಭಯುಗದ ||
ನಾಡು ಬಲಿತಿಹ ಬೀಜ ಕೋಶವು |
ಬೀಡು ಪೂರ್ವದ ಬೀಜ ಭಾಗ್ಯಕೆ ||
ನಾಡು ನೊರಗಿದ ನಾಡು ನಮ್ಮದು |
|| ಬರಿವ ಭಂಡಾರ || ೩ ||

ವ್ಯಾಸನಾ ವಾಲ್ಮೀಕಿ ಮೊದಲಾ |
ದೇಸು ಕವಿಗಳು ವಕ್ಕಿ ತೂರುತ ||
ಭಾಸುರಾತ್ಮಕ ಭಾವವೆಲ್ಲವ |
|| ಕಾವ್ಯ ಕಣಜದಲಿ ||
ಏಸನಿಟ್ಟರು ಯೋಗಮುರ್ಪದೊ |
ಛಾಸುಯೋಗದ ಸುಗ್ಗಿ ಕಳೆಯಿತು ||

ಈ ಸುಕಾವ್ಯಗಳೆಲ್ಲ ಕೇಳಿರಿ |
|| ರತ್ನ ಭಂಡಾರ || ೪ ||

ಜಂಬುದ್ವೀಪವು ಬಿರಿವ ಬೊಕ್ಕಸ |
ನಂಬಿ ನಂಬಿರಿ ನಿಮ್ಮ ಹೃದಯುಗ ||
ಳೆಂಬ ವ್ರೋಟಿಗಳೆಲ್ಲ ಬಿರಿವವು |
|| ನಾಳೆ ಶುಭಯುಗಕೆ ||
ಹಂಬಲೇತಕೆ ಅಳಿದ ಭಾಗ್ಯಕೆ |
ಇಂಬುಗೊಟ್ಟರೆ ಬರುವ ಯೋಗಕೆ ||
ನಂಬಿ ಹೃದಯುವು ನಿಮ್ಮದೆಲ್ಲವು |
|| ಬಿರಿವ ಭಂಡಾರ || ೫ ||

ಶ್ರೀ| ಹೊಯಿಸಳ.

---

## ಪರೆಯು.

### (ಅಥವಾ ಹೊಲೆಯು.)

(ಭಾಮಿನಿ.)

ಹೊನ್ನಯುಗಗಳ ನೆನಹ ನೆನೆಗಳ |
ಮುನ್ನ ಮಡರವೆ ಕಂಟ ಕಾಳಿಯು |

ಬನ್ನ ಬಡುವರ ಪರೆಯು ರೆಂಬರ |
|| ತುಳಿದ ನೆಸಹಿರದೆ ||

ಕಣ್ಣನೀರಿನ ಚಿರಪ್ರವಾಹಕೆ |
ಮಣ್ಣು ಸಡಲಿರ ಲುರುಳೆ ಸುಖಿತರು |
ಕಣ್ಣೆಗಚ್ಚರಿ ಯೇಕೆ ಮ್ಲೇಚ್ಛನ |
|| ಛಾಟಿ ಹಾರುತಿರೆ ||

ಶುಚಿಯು ನಗುತಲೆ ಹಿಂದೆ ಬರ್ಪಳು |
ಉಚಿತ ಮಾರ್ಗವು ತನಗಿದೆನುತಲೆ |
ಸಚಿನ ಕೊಲೆಯನು ಹಿರಿಯ ಪರೆಯನು
|| ಹೊರಟು ನಿಂದೆಡೆಗೆ ||

ಸಚಿನ ಬಾ ಧರೆಯೆಲ್ಲ ವಳೆಯುವ |
ಶುಚಿಯು ಜಾಹ್ನವಿ ಹರಿದು ಶ್ರೀಹರಿ |
ಗುಚಿತ ದಾಸನವಾಗಲೀಧರೆ |
|| ಪರೆಯು ಬಾ ಧೊರೆಯೆ ||

ಚಿಗುರಿ ಬೆಳೆಯುದ ಮನಗಳಿಲ್ಲಿವೆ |
ಚಿಗಿದು ವುರಿಯುದ ಭಾವವಿಲ್ಲಿದೆ |

ಮೃಗದ ಗವಿಯೊಲು ಹೊಲಸನಿಟ್ಟಿದೆ |
|| ಹೊಲೆಯನಿಲ್ಲದೆಲೆ ||

.... .... .... ...

ನಗುವ ತಾಣವ ಕಂಡೆಯಾದರೆ |
ಹೊಗೆಯು ಸುತ್ತಿರೆ ಜಗದ ಕಳೆಯನು |
ಓಗೊಗೊ! ಹೊಲೆಯನ ಹೆಜ್ಜೆ ಹರಿದಿದೆ
|| ನಾಡಿನುದ್ಧರಕೆ ||

.... .... ... ....

ಶಿವಕೆ ಪಡದಿರು ಧರೆಯ ದೂರಿಗೆ |
ಭವದ ರಜದಲಿ ಹೊರಳಿಯಾಳುವ |
ಇವರ ಪುಣ್ಯಕೆ ನಾವು ಕಾರಣ |
|| ರೆಸಿಸಿ ಬಾಳುವಣ ||

ಭವದ ನಂಜನು ಕುಡಿದು ಕಾಯ್ದನ |
ಶಿವನ ಸಹುಮ್ಮಿದಲ್ಲಿ ಹಿರಿಯನು |
ಭವಣೆಯನ್ನದಲವನ ಸೃಷ್ಟಿಯ |
|| ಶುಭ್ರಮಾಡಿದವ ||

.... .... .... ....

ನಾಡಗುವರರ ಮಾಡೆ ಪರರನು |
ನೋಡು ನೋಡವ್ವ ಹಿರಿಯರಾರ್ಜನೆ |
ಖೋಡಿ ಖೂಳರ ಸೇರುತಿರ್ಪವು |
॥ ಇಹಕೆ ಪರಕಿರದೆ ॥

ಮಾಡದಿರು ಹುಲು ಮನುಜ ಭೇದವ |
ಆಡದಿರು ಪರಪರೆಯು ನೆನುತಲಿ |
ನಾಡ ಮಂಗಳಕಾರಿ ನಿನ್ನನು |
॥ ದೂರದೂರೆನುವ ॥

ಶ್ರೀ। ಹೊಯಿಸಳ.

# ನೆನವರಿಕೆ.

## ಸಾಂಕ್ಯಾರು ತಿಲಕಾಶ್ರಮು.

ಏರಿ ಗಗನ ತಲಕೆ ಪಕ್ಷಿ |
ತೇರತೆರದೆ ಕಣ್ಣ ತಣಿಸಿ |
ದೂರದಿಂದೆ ಮನವ ಸೆಳೆವ ಭೋಗಿ ದ್ರುಮಗಳಿಂ |
ಸೇರಿ ಸೊಗವ ಬೀರುತಿರ್ಪ ಗುಲ್ಮಲತೆಗಳಿಂ ॥ ೧ ॥

ನಲಿಯುತಿರ್ಪ ಶುಕಗಳಿಂದ |
ಉಲಿಯುತಿರ್ಪ ಪಿಕಗಳಿಂದ |

ಬಲವ ಬೀರ್ವ ವನಕಪೋತ ವೃಂದದಿಂದಲಿ |
ಒಲದೆ ಕರೆವ ಝಿಲ್ಲಿಕೆಗಳ ತಿಳ್ಳಿನಿಂದಲಿ || ೨ ||

ಪಚ್ಚೆ ಪೈರ ಹೊಲಗಳಿಂದ |
ಸುತ್ತಲೆಸೆವ ಬನಗಳಿಂದ |
ಹತ್ತಿ ಜಾಜಿ ಮಲ್ಲಿಕೆಗಳುದ್ಯಾನದಂದದಿ |
ಉತ್ತಮಾಂಗ ವೆತ್ತಿ ನೆರೆವ ಕಟ್ಟಡಂಗಳಿಂ || ೩ ||

ಇನಿತು ಸೊಗದ ಸುಗ್ಗಿಯಲ್ಲಿ |
ಜನನಿ ಪ್ರಕೃತಿ ಮಡಿಲಿನಲ್ಲಿ |
ಮನಕೆ ಶಾಂತಿಯೀವ ವಾತಾವರಣ ಮಧ್ಯದಿ |
ಜನುಮ ಭೂಮಿಯ ಮುಕ್ತಳನ್ನು ಮಾಳ್ಪಧ್ಯೇಯದಿ || ೪ ||

ತಿಲಕವಂ ಲಲಾಟದಿಂದೆ |
ತಿಲಕನಳಿದ ದುಗುಡದಿಂದೆ |
ತಿಲಕ ಜನನಿ ಮಾಸೆ ತಿಲಕನಮಲ ತೇಜವಂ |
ತಿಲಕದಂತೆ ಮೆರೆಸಲೆಳಸುವತುಳಕಾಂಕ್ಷೆಯಿಂ | || ೫ ||

ಲೋಕಮಾನ್ಯ ತಿಲಕ ಮರಣ |
ಏಕ ವತ್ಸರಾಂತ ದಿನದ |

ಶೋಕ ಮಥಿತನಂತ ಹೃದಯಾಂಬುಜದೊಳೇರಿಹ |
ಏಕಧ್ಯೇಯು ರೂಪಪಿುದುಪೆ ತಿಲಕನಾಶ್ರಮು || ೬ ||

ಕೆ. ಕಾಂತಪ್ಪ ಶೆಟ್ಟಿ.

---

## ಗೂಡಿನ ಗಿಳಿ.

(ಕುಸುಮ ಷಟ್ಪದಿ)

ಅಡಿಗಡಿಗೆ ಕಾಡಿನೊಳು |
ಗಿಡಗಿಡವನೇರುತ್ತ |
ಮಡದಿ ಮಕ್ಕಳಗೂಡಿ ಲೀಲೆಯಿಂದ ||
ಬಿಡದೆನುಣ್ಣುರಪಾಡು |
ತಡವಿಯೊಳಗರೆಬಿರಿದ |
ಜಡಪಿಗತ ಹೂವುಗಳ ಬಳಿಯೊಳಾಡಿ || ೧ ||

ಹೊಂಬಣ್ಣದೆಳ ಬಿಸಲಿ |
ನಂಬರದಿನೇಸರನು |
ತುಂಬಿ ಖರಕರಗಳಿಂದೋಲಾಡಲೂ ||
ದುಂಬಿಗಳು ಬಂಡುಣಿಯು |
ನುಂಬುದಕೆಮನ ವೋತು !
ಹಂಬಲಿಸದೊಡಲಿನಿಂದೋಡುವುದನೂ || ೨ ||

ನೋಡಿ ಮರಿಗೂಡಿ ಕ |
ಟ್ಟಡವಿಯಲಿ ನಲಿದುಲಿದು |
ಪಾಡಿ ಸ್ವಾತಂತ್ರ್ಯದಿಂದಾಡಿದರಗಿಳಿಯೂ ||
ನಾಡಹೊಕ್ಕಿತು, ಮರಳಿ |
ಕಾಡ ಸೇರದೆ ಅಲ್ಲಿ |
ಗೂಡಸೇರಿತು; ಬಳಿಕ ಚಿಂತಿಸಿದುದೂ || ೩ ||

ಮೂಡಣಾ ಮುಂಬೆಳಗು |
ಗಾಡಿವೆತ್ತಾಡಲಿದೊ |
ಜಾಡೆ ಕುವಲಯ ಪುಷ್ಪ ಕಮಲವರಳೇ ||
ನಾಡಗುಡಿಯೊಳು ಗಂಟೆ |
ಬಿಡದೆ ಬಾಜಿಸುತಿರಲು |
ಮೂಡಹಾಡನು ಪಾಡಿ ನಲದಾಡಿದೆ || ೪ ||

ಎಲ್ಲಿ ಸ್ವಚ್ಛಂದವುದು? |
ತಲ್ಲಣಿಸೆ ಮನವನ್ನು |
ಪುಲ್ಲ ನೇತ್ರದಿ ಪಾದಪದ ತೆರದೊಳೂ ||
ಚೆಲ್ವ ಭೂರುಹದಲ್ಲಿ |

ಒಳ್ಳಿತನು ನಾ ಹಾಡಿ |
ಸುಲ್ವಾತಿನಿಂ ಮೆರೆದ ಸ್ವಾತಂತ್ರ್ಯವೆಲ್ಲಿ? ॥ ೫ ॥

"ಗಣಪತಿ."

## ಮಗಂಗೆ ಹೇಳಿದ ಬುದ್ಧಿವಾದ; ಹೊನ್ನಿಲ್ಲದ ಸ್ಥಿತಿ.

ಹಾಲಕಂಡೊಡೆ ಬೆಕ್ಕು ಕೂಳಕಂಡೊಡೆ ನಾಯಿ ಬಾಲವಲ್ಲಾಡಿ ಪಂತೆ | ಬಾಳಿಂದೆ ಬದುಕಿಂದೆ ಮೇಲಾಗಿರ್ಪಂದಿಂಗೆ ಜೋಲಿಪ್ಪರೆಲ್ಲಾ ನಿನ್ನಾ ॥ ॥ ೧ ॥

ಹೊನ್ನಧರ್ಮದೆ ಕೂಡಿಯುಣ್ಣು ಲೋಕದ ಬೇರ ಹೊನ್ನಿಂದೆ ನಡದಪ್ಪುಗು | ಹೊನ್ನಿಲ್ಲದವನನ್ನು ಕಣ್ಣೆತ್ತಿ ನೋಡರ್ತನ್ನಣ್ಣತಮ್ಮಂದಿರೆಂದೂ ॥ ॥ ೨ ॥

ಇರುಳುಹಗಲು ಬಿದ್ದೆಬರದೆ ಮುನ್ನೂರ ಮಂದಿರದಲ್ಲಿ ಬಿದ್ದಿರ್ದನು | ತೆರೆದು ನೋಡರ್ಕಣ್ಣ ಕರೆಯುವಮಾತಾಡರ್ಕೈ ಶಿರಕೆನ್ನ ಕರ ಕೇಳಯ್ಯಾ ॥ ॥ ೩ ॥

ಬಂಧು ಬಾಂಧವರ ಸಂಬಂಧಗಳೆಲ್ಲ ಕೈ ಕುಂದಾಗೆ ಕಣ್ಬಟ್ಟಿಗೆ | ಒಂದಿಷ್ಟು ಕಾಣರಿಂತೆಂದು ಕೈ ಬಿಡಬೇಡ ಬಂದ ಸಂಕಟಕ್ಕವರಾ ॥ ೪ ॥

ಸಾಯಿ ಕಚ್ಚುವುದೆಂದು ನಾಯ ಕಚ್ಚುವುದುಂಟೆ ಮುಯ್ಯಿಂಗೆ ಮುಯಿ ಮಾಡುವ | ನ್ಯಾಯವ ಬಿಟ್ಟು ನಾರಾಯಣಗರ್ಪಿಸು ಸಾಯವಂ ಮಾಡುತ್ತಿರು || || ೫ ||

ಮುನ್ನೂರು ಶಿವರಾಮಯ್ಯ.

---

## ಒಂದು ಹಾಡು.

ತಾಯಿಯ ರೂಪದ | ಮಾಯೆಯ ತಿಳಿಯದೆ |
ಸಾಯುವ ದಾರಿಯ ಕೈಕೊಂಡು ||
ಮಾಯಾ ಜನರನಿ | ಕಾಯವು ಮೋಹದೆ |
ತಾಯಿಯ ಭೋಗವ ಬಯಸಿದುದು || ೧ ||

ಕರಿಯದು ಸೋಂಕಿಗೆ | ಹರಿಣಿಯು ಗಾನಕೆ |
ಮರಿದುಂಬಿಯು ತಾ ಪರಿಮಳಕೆ ||
ಉರಿಗೆ ಪತಂಗವು | ಮರಿಮೀನ್ಗಳಕೆ |
ಪರಿ ಪರಿ ಭೋಗಕೆ ಖಳರಿವರು || ೨ ||

ಸಾಗರ ವಸನನ | ಬೇಗನೆ ಸೆಳೆದೆದೆ |
ಭಾಗದ ತಾರಾ ಸರ ಸೋಡಿ ||
ಕೂಗುತ ಹಾರಿದ | ರಾಗಸಕಾಗಲೆ !
ಭೋಗದ ಲಾಲಸೆಯೇರಿದುದು || ೩ ||

ಸಲ್ಲದ ಗುಟ್ಟುಗ | ಳೆಲ್ಲವ ಬಿಚ್ಚುತ |
ಮೆಲ್ಲನೆ ಜನನಿಯ ವಶಗೊಳಿಸಿ ||
ಬಲ್ಲಿದರಾಪಂ | ದೆಲ್ಲರ ಬಾಯೊಳು |
ನಿಲ್ಲುವೆವೆಂದರು ಖಳರವರು || ೨ ||

ತೋರುತ ಲಡಗುತ | ಸಾರದ ಬೆಡಗನು |
ಭೂರಿಯ ಜಾಲದೆ ಸೆಳೆಯುತ್ತ ||
ಘೋರಾಕಾರದ | ಮೋರೆಯ ಮೀರುತ |
ಮಾರಿಯು ಎದ್ದಳು ಕ್ರೋಧದಲಿ || ೫ ||

ರಕ್ತದ ನದಿಗಳು | ರಕ್ತದ ಸಾಗರ |
ದಿಕ್ತಟವೆಲ್ಲವು ರಕ್ತಮಯ ||
ಶಕ್ತಿಯು ಪರಿತು | ರಕ್ತವ ಕುಡಿದಳು |
ಭಕ್ತರು ಬೆದರಲು ಜಗದೊಳಗೆ || ೬ ||

ನಡುಗಿತು ಭೂಮಿಯು | ಜಡಧಿಯು ಉಕ್ಕಿತು |
ಬಡಬಾನಲವೆದ್ದಿತು ಜಗದೆ ||
ಕಡುತರ ರೋಗಗ | ಳಡಿಗಡಿಗೆದ್ದವು |
ಬಡಜನರೆದೆಯೊಳು ಮರುಗಿದರು || ೭ ||

ಮಾತೆಯು ಕುಣಿದಳು | ಭೂತಳಕಚ್ಚರಿ |
ಮಾತೆಯ ನೃತ್ಯದ ಹೊಸಪರಿಯು ||

ಮಾತೆಯು ಕೊರಳೊಳ | ಗಾತಾರಕೆಗಳು |
ಮಾತುಗಳಿಲ್ಲದೆ ನಗುತಿಹವು || ೮ ||

ಬಾಲಕನವ ಪ್ರ | ಹ್ಲಾದನ ತೆರದಲಿ |
ತಾಳಿದ ಧೈರ್ಯವ ಮುಂದರಿದ ||
ತಾಳೌ ಮಾತೆಯೆ | ತಾಳ್ಲೆ ಶಾಂತಿಯು |
ಹೇಳಿದ ಶಾಂತಿಯು ನುಡಿಗಳನು || ೯ ||

ಮಾತೆಯು ಹೃದಯದಿ | ಪ್ರೀತಿಯು ಹುಟ್ಟಿತು |
ಮಾತೆಯು ಶಾಂತಿಯು ಧರಿಸಿದಳು ||
ಮಾತೆಯು ಕೊರಳೊಳ | ಗಾತಾರಕೆಗಳು |
ಮಾತುಗಳಿಲ್ಲದೆ ನಗುತಿಹವು || ೧೦ ||

ಹಿ. ರಾ.

---

# ಭೀಷ್ಮನ ಪ್ರತಿಜ್ಞಾ ಪೂರಣ

## ಅ ಥ ವಾ

# ಭಗವಂತನ ಭಕ್ತವಾತ್ಸಲ್ಯ.

|| ಕಂದಂಗಳ್ ||

ಶ್ರೀರಮಣಂ ಮಣಿ ಸುಸ್ಥಿತ |
ಪೇರುರನುರುದೋಷದೂರನಂದುಂ ಪೂಣ್ದಿರೆ ||

ಭಾರತದಾಹವದೊಳ್ ತಾಂ |
ಪಾರುಂಬಳೆ ಪಿಡಿಯೆನೆಂದು, ಬಳಿಯುಂ ಧುರದೊಳ್ || ೧ ||

ಕಾಲಂ ಕಟ್ಟುಗ್ರದೆ ಕರ |
ವಾಳವುಸಾಂತಿರದೆ ಸದೆವನೋ! ಪೋಣಾ ವರ ||
ಶೂಲಿಯೆ ಲಯಕಾಲದೆ ಜನ |
ಜಾಲವನುಗೆರ್ತ್ತಿ ಬಹನೊ! ಪೇಳೆನೆ ಭೀಷ್ಮಂ || ೨ ||

ಭೂರಿ ಬಲಂಗಳನುಂ ನೃಪ |
ವಾರವನುಂ ಬಿಡದೆ ಕಡಿಯುತಾಗಳೆ ಯಮುನಾ ||
ಗಾರವನೊಳವುಗಿಸುತ ಜನ |
ವಾರಿಧಿ ಭಯಗೊಳೆಯುಪೋಘ ಶೌರ್ಯದೆ ಪೊಯ್ದಂ || ೩ ||

ವಿರಾಗ್ರಣಿ ಪಾರ್ಥಂ ಕಡು |
ಶೌರ್ಯೋತ್ಸಾಹದೆ ವಿಶೇಷ ಕೌಶಲದಿಂದಂ ||
ಕೂರಲಗಂ ಎದೆಗಾಣಿಸಿ |
ಪೋರಲದೇಂ ಭೀಮ ಭೀಷ್ಮನದ ಲೆಕ್ಕಿಪನೇ? || ೪ ||

ಆವಗಮುಂಬಂ ತೊಡಚುವ |
ನಾವಗನಾರ್ದೆಸುವ ವಿಶಿಖಮೊಂಬುದ ಮನದೊಳ್ ||
ಭಾವಿಸಲಸದಳಮೆನೆ ಭಟ |
ದೇವಂ ನರನಂ ವಿಭಾಡಿಸಿದನಾಹವದೊಳ್ || ೫ ||

ನೊಂದಂ ನರ ಸೋಣ್ ಮೂರ್ಛೆಗೆ |
ಸಂದಂ ತೇರ್ತಿರ್ರಸೆಂದು ತಿರುಗಲ್ ತೇಜಿಗ ||
ಛಂದಂ ಗಿಡೆ, ಮತ್ತಂ ಪುಗೆ |
ಸಂಧಿಸಿದಂ ಕೋಲಸಾಲ ಗೋವಿಂದಾಂಗಂ || ೬ ||

ಕೂರಲಗುಂ ನಾಂಟಲ್ ಫಣೆ |
ಗೋರಂತಿರದೊಡನೆ ನೊಂದು ಬೆಂದುಂ ಬಗೆಯೊಳ್ ||
ಘೂರಿಕ್ರೋಧಮನಾನುತೆ |
ಶ್ರೀರಮಣಂ ತಾಂ ತುಡುಂಕಿ ಚಕ್ರಮನಾಗಳ್ || ೭ ||

ಈಗಳೆ ಭೀಷ್ಮನ ಜೀವನ |
ನೀಗಿಪೆ ಜಗಮೆಲ್ಲ ದಹಿಪೆನೆಂದುಂ ಭರದೊಳ್ ||
ಯೋಗೀಂದ್ರ ವಿನುತ ಚಕ್ರಮ |
ನಾಗಳ್ ತಾಂ ಕಳುಪಲೆಂದು ನಿಂದಂ ರಥದೊಳ್ || || ೮ ||

ನಲವಿಂದೀಕ್ಷಿಸಿ ಭೀಷ್ಮಂ |
ಘುಳಿಲನೆ ತಾನಿಳಿದು ರಥಮನೆರಗುತಲೆಂದಂ ||
ನಳಿನಾಕ್ಷ ನೇಸಿದೇನಿದು! |
ಛಲವೈ ನೀನೆನ್ನ ಕೊಲ್ವೆನೆಂದುಂ ಬಗೆವೈ || ೯ ||

ಸೃಷ್ಟಿ ಸ್ಥಿತಿ ಲಯಕಾರಣ! |
ಕಷ್ಟಮದೇಕಯ್ಯ ಕೊಲಲು ಚಕ್ರಮದೇಕೆ? ||

ಇಷ್ಟೇಂ ಸಾಹಸ? ಗುಬ್ಬಿಯು |
ಹುಟ್ಟಣಗಿಸಲೇಕೆ ಬ್ರಹ್ಮಬಾಣ ಮಮೋಯುಂ || ೧೨ ||

ಆದೊಡದೇಂ ಚಕ್ರದೆ ಹೊಡ! |
ಮಾಧವ! ನೀಂ ಮನದಿ ಬೇರೆ ಬಗೆಯುತ್ತೇಡಾ ||
ಶ್ರೀಧರನೇ ನಿರತಂ ತವ |
ಪಾದಾಂಬುಜ ಭಕ್ತನೆನ್ನ ಮುಟ್ಟುಗೆ ಯಾದುತಾಂ || ೧೧ ||

ಹರಿನಿನ್ನ ನಾಮ ಸುಧೆಯುಂ |
ಭರದಿಂದೀಂಟುತಲದಾವಗಂ ಸಂತಸದೊಳ್ ||
ಗಿರುತಿರ್ಪುದಿದುಂ ನಿಜಮಾ |
ಗಿರೆ, ನೀನಾರ್ದಿಟ್ಟ ಚಕ್ರಮೆನ್ನಂ ಮುಟ್ಟಂ || ೧೨ ||

ಮಿಗೆ ತವ ಪವಿತ್ರ ನಾಮಂ |
ಬಿಗಿದಿರ್ಪ ವಜ್ರಕವಚದಂತಿರೆ ಮೆಯ್ಯೊಳ್ ||
ನಗಧರ ಸುದರ್ಶನಮ್ಮದ |
ನುಗಿಯಲ್ ಬಲ್ಲುದೆಯುದೇಕೆ ಪೌರುಷ? ಬಿಡು ನೀಂ! || ೧೩ ||

ಹೇ ದೇವ! ಕಳುಪು ಚಕ್ರಮ |
ನೀ ದೋಷಿಯು ಕೊಲ್ಲಲೆಂದು ಮಾದೊಡದುಂ ತಾ ||
ನೀ ದೇಹದ ನವಿರೊಂದಂ |
ಸಾಧಿಸಿ ಕೀಳಲ್ ತವಪದ ಸೇವಕನಲ್ತಾ || ೧೪ ||

ವರ ಭಗವದ್ಭಕ್ತಾಗ್ರಣಿ |
ಸುರುಚಿರ ಗುಣ ಭರಿತ ಭೀಷ್ಮನಿಂತೆಸೆ ಕರುಣಾ ||
ಭರಣಂ ಕ್ರೋಧೋದ್ರೇಕವು |
ತೊರೆದುಂ ನಸುನಗುತೆ ತೇರನೇರಿದನೊಲವಿಂ || ೧೫ ||

ಹರಿಯುಂ ಹವದೊಳ್ ಚಕ್ರವು |
ನಿರದಾಂ ಪಿಡಿವಂತೆ ಮಾಳ್ಪೆನೆಂದಂತೆಸಗಿದ ||
ವರಗುಣಿ ಭೀಷ್ಮನ ಸಾಹಸ |
ದಿರವೇಂ ಕೇವಳವೆ? ಸುಗುಣದೇಳ್ತರ ಕಿರಿದೇಂ? || ೧೬ ||

ಭಾರತ ಧುರದೊಳ್ ಚಕ್ರವು |
ನಾರಿಂಗುಂ ಪಿಡಿಯೆನೆಂಬ ಮಾತಂ ಮುರಿದುಂ ||
ಶೌರಿಯು, ಭಕ್ತನ ಪೂಣ್ಕೆಯ |
ಪೂರೈಸಿದನವನು! ಶರಣ ಕರುಣೆಯು ಪಿನಿತೋ!! || ೧೭ ||

ಸುರತ್ಕಲ್ ಸುಬ್ಬರಾವ್.

---

## ಆತ್ಮಯಜ್ಞ.

ಅತುಲಭುಜಬಲ ಭೀಮಸುತನೊರ್ಧ್ವಕೇಶಿ ತಾ |
ನತಿಗರ್ವದಿಂದಂದು ಕಡಲ ಕರೆಯೊಂದರಲಿ |

ಯತಿವಿಘ್ನವಹ ತನ್ನ ಪದನೊಂದಿಸಿರಿಸಿ ಮತ್ತೊಂದನಿನ್ನೊಂದುದ
ಡದಿ ||

ಜತನದಿಂದಿಟ್ಟೊಂದು ಖಡ್ಗವಂ ಮಸೆವ ಸಂ |
ಗತಿಯನಾ ಲೋಕಲೀಲಾಲೋಲನೀಕ್ಷಿಸುತ |
ಕ್ಷಿತಿಸುರನ ವೇಶವಾಂ ತಾಳ್ದು ಬಂದೀ ತೆರದಿ ಗೈವುದೇಕೆಂದೊರೆ
ಯಲು || ೧ ||

ಭಾರತಮಹಾಹವಕೆ ಸಿದ್ಧನಾಗುತೆ ಮುಂದೆ |
ವೈರಿವಂಶಕುಠಾರನೆನಿಸಲೆಸಗುವೆನೆನಲ್ |
ನಾರಾಯಣಂ ಕೇಳಿದಂ ಪೋರ ನೀ ಗೈವುದೇನೆಂದು ಭೀಮಜನೊಳು ||
ವೀರನಾಗಲ್ಲಿರ್ದ ಅಶ್ವತ್ಥವೃಕ್ಷಕಾ |
ಕೂರಾದ ಕತ್ತಿಯಿಂ ಕಡಿಯಲಾಗೇನೆಂಬೆ |
ಭೂರುಹದಿ ಸಾರ್ಧಪಂಚಕ ಪತ್ರಗಳನುಳಿದು ಮಿಕ್ಕೆಲೆಗಳೆಲ್ಲ ಬೀಳೆ
|| ೨ ||

ಏನಿದೈ ವೃಕ್ಷದೊಳು ಸಾರ್ಧಪಂಚಕಪರ್ಣ |
ಕಾಣುವುದು ಪೇಳೆಂದು ಹರಿಯು ಕೇಳಿದ ನುಡಿಗೆ |
ತನ್ನ ಪಿತರೈವರುಳಿವರು ಮುಂದಿನಾಹವದಿ ಕೃಷ್ಣನೆರಡೂ ಕಡೆ
ಯೊಳು ||

ಸಾನುರಾಗವ ತೋರ್ಪನದರಿಂದ ಕೌರವರ |
ಪ್ರಾಣ ತೆಗೆವಾಗ ರಿಪುಪಕ್ಷಾರ್ಧದಾ ಹರಿಯು |

ಪ್ರಾಣಾರ್ಥಗೈದೆಮ್ಮ ಪಕ್ಷಾರ್ಥದಾ ಹರಿಯು ಪ್ರಾಣಾರ್ಥವನ್ನುಳಿ
ಸುವೆ || ೩ ||

ಮೇಲೆ ನೋಡೆಂದೆನಲು ಕೃಷ್ಣನಾ ವೈರಿಕುಲ |
ಕಾಲಭೀಮಜಭೀತಿ ಬರುದೆಂದು ಭಯದೊಳಾ |
ವೇಳೆಯೊಳೆ ಧರ್ಮಜನ ಬಳಿ ಸರಿದು ಸಮರದೊಳು ಗೆಲುವುದಕೆ ನರ
ಯಜ್ಞವ ||
ಕಾಲಗಳೆಯದೆ ಮಾಡಬೇಕದಕೆ ಕಾಯದೊಳ್ |
ಮೇಲೆ ರೋಮಗಳಿದ್ದ ಕೆಂಗಣ್ಣ ಕೆಮ್ಮಾಸೆ |
ಯಾಳಾಗಬೇಕೆನಲು ತಕ್ಕವನ ತರುವುದಕೆ ಧರ್ಮ ತಮ್ಮನೊಳುಸಿ
ರಿದ || ೪ ||

ಭೀಮನಾ ಸಂಗತಿಯನೂರ್ಧ್ವಗೇತಿಯೊಳೊರೆಯೆ |
ಪ್ರೇಮದಿಂದಲೆ ತಾತನಾಜ್ಞೆಯಂ ನಡಸುವರೆ |
ಭೂಮಿ ಯೆಲ್ಲಾ ತಿರುಗಿ ಸಿಕ್ಕದಿರಲೊಂದು ದಿನ ಮೊಗ ತೊಳೆಯು
ತಿರಲು ಜಲದೆ ||
ಕಾಮಿಸಿದ ಲಕ್ಷಣಂಗಳ ತನ್ನೊಳೇ ಕಂಡು |
ಕಾಮಜನಕನ ಕಪಟಕಾರ್ಯವಂದರಿತೊಡಂ |
ಸೌಮನಸ್ಯದಿ ಜನಕನಾಜ್ಞೆಯಂ ಪಾಲಿಸಲು ನಿಜತನುವನೀವೆನೆಂದು
|| ೫ ||

ವೈರಿಗಜಹರಿಯೂರ್ಧ್ವಕೇತಿಯುವ ತನ್ನಾಶ |
ರೀರವಂ ಭಾರತೀಂದ್ರಾರಯಜ್ಞಾಹುತಿಗೆ |
ಧಾರೆಯೆರೆದೊಡೆ ಜನ್ಮ ಸಾರ್ಥಕವದಾಯ್ತೆಂದು ನಿಃಸ್ವಾರ್ಥಿಯಾಗಿ ಪೋಗಿ ||
ನೀರಗುಳ್ಳೆಯು ಬಾಳಿನೋಲ್ ಕ್ಷಣಿಕವಾಗಿರುವ |
ಧಾರಿಣಿಯು ನಶ್ವರ ಸುಖಂಗಳಿಗೆ ಮನಗೊಡದೆ |
ಚಾರುತರ ಪಿತೃಭಕ್ತಿಯಿಂ ಭಾರತೀಸುತಂ ಭೀಮನೆಡೆಗಂದು ಬಂದು || ೬ ||

ತಂದೆಯೊಳು ತಾನೆನದೆ ತಂದಿಹೆನು ತಕ್ಕವನ |
ನೆಂದೊರೆದು ಯಾಗಸಾಲೆಯೊಳಿಂದು ಪವಡಿಸುವೆ |
ನಂದದಿಂ ಬಟ್ಟೆಯಿಂ ಹೊದಿಸುತಲೆ ಜನಕನೇ ತೆರೆದದಂ ನೋಡಬೇಡ ||
ಎಂದು ನಡೆದಲ್ಲಿಂದ ಯಜ್ಞಸಾಲೆಯ ಬಳಿಗೆ |
ಬಂದವಂ ತಿಳಿಯದಾ ಪರಿಯಿಂದ ವಸನವ |
ನ್ನಂದದಿಂ ಧರಿಸುತ್ತ ನೆರೆ ಮುಸುಕು ಹಾಕುತ್ತ ಮಲಗಿದಂ ಬಾಲನ ಕಟಾ || ೭ ||

ನರನ ಯಾಗಕೆ ತಂದೆ, ತಂದೆಯೆಂದೆಂದೊಡನೆ |
ತರಳ ಸಾಹಸಿ ಕಾರ್ಯದಕ್ಷನೆನ್ನುತ ಹೊಗಳಿ |
ಬರಿಮಾತನೇ ನಂಬಿ ನೋಡದಾರೆಂಬುದಂ ಕೂರಸಿಯ ಪಿಡಿದು ಭೀಮ ||

ಸರಿದನಯ್ಯೋ! ಯಜ್ಞಶಾಲೆಯೊಳು ತನ್ನಣುಗ |
ಮರೆಸಿರುವ ತಕ್ಕನನೆಂದು ಭಾವಿಸಿಕೊಂಡು |
ಕರಕರನೆ ಕಾಲಿಂದ ಕಂಠಪರ್ಯಂತವಾ ಒಡ್ಗಿ ಕೊಚ್ಚುತಿರಲು
||೮||

ಅಕ್ಕಟಾ! ಬಾಲಕಂ ಹೇಳಿದಂ 'ತಂದೆಯೇ |
ಹುಕ್ಕಳಿದ ಕಣ್ಣೊಡೆಯ ಕಡಿಯುವರು, ಕೌರವರ |
ಸೊಕ್ಕ ಮುರಿದಿಕ್ಕುವುದನೀಕ್ಷಿಸಲು ಬಿಟ್ಟುಬಿಡು ದಯದೊಳದ'
ನೆಂದೊರೆಯಲು ||
ದಿಕ್ಕು ತೋರದೆ ಭೀಮ ರುದ್ರಾವತಾರದಿಂ |
ರಕ್ಕಸಾರಿಯ ಜರೆದು, ಪುತ್ರ ಶೋಕಾನಲನ |
ಲೆಕ್ಕಿಸದೆ ತನ್ನ ಸುತನಾತ್ಮಯಜ್ಞಕ್ಕಾಗಿ ಮನದೆ ಸಂತಸಗೊಂಡನು
||೯||

ಎದ್ದೇಳಿ ಭಾರತೀಯರೆ! ರಾಷ್ಟ್ರಸೇನೆಯೊಳ್ |
ಬದ್ಧ ಕಂಕಣರಾಗಿ! ಬಿದ್ದಿರುವ ಭಾರತಿಯ |
ನುದ್ಧರಿಪ ಕಾರ್ಯದೊಳಗಾತ್ಮಯಜ್ಞಕ್ಕಾದರೂ ಮುಂದೆ ಸಿದ್ಧರಾಗಿ ||
ಊರ್ಧ್ವಕೀರ್ತಿಯು ಭಾರತೀಯನಲ್ಲವೆ! ಅವನೊ |
ಳಿರ್ದ ರಕ್ತವು ನಿಮ್ಮೊಳಿಲ್ಲವೇ? ಬಾಂಧವರೆ |
ಎದ್ದೇಳಿರೆದ್ದೇಳಿ! ಭಾರತಾಂಬೆಯ ಭರದೊಳುದ್ಧರಿಸಿ ಶ್ರದ್ಧೆಯಿಂದ
||೧೦||

ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚಿತ್ತಾಯ.

# ಚಾಣಾಕ್ಯ ರಾಕ್ಷಸೀಯು.

(ಭಾಮಿನಿ.)

ತನ್ನ ದೊರೆಗಳ ಹರಣದೊಡನಾ | ಕಣ್ಣಿಯುರುಲಿನ ನೀತಿ
ಜಾಲಗ | ಳೆನ್ನಲೇನೊಂದೆರಡು ಮೂರೆಂಬೆಣಿಕೆಯಿಂ ಹರಿಯೆ || ಅನ್ನೆ
ಗಂ ಪಾಟಲಿಪುರದಿ ಮನ | ದನ್ನ ಚಂದನದಾಸಗೊದಗಿದ | ಬನ್ನವಾ
ಲಿಸಿ ರಾಕ್ಷಸಂ ಬೆದೆಬೆಂದು ಬೆಂಡಾದಂ || ೧ ||

ಹಿಡಿದ ಮೆಟ್ಟಿದ ಕೊಂಬೆಗಳು ತಾ | ನುಡಿಯುತಿವೆ ಬರಿದೇತಕೇ
ರುವ | ಗೊಡವೆ ಬೊಂಬೆಯದಾಗೆ ಕೌಟಿಲ್ಯನ ಕರದಿ ವಿಧಿಯು || ಒಡಲ
ಸಿತ್ತಾದರೆಯು ಕೆಳೆಯನ | ಬಿಡದೆ ಸಲಹುವೆನೆಂದು ಪರ್ವತ | ನೆಡೆಯ
ಸುಳಿದೇಕಾಕಿ ಖಡ್ಗ ಸಹಾಯನೈತಂದ || ೨ ||

ಹಲವು ಪಯಣದ ಮೇಲೆ ಪಯಣಂ | ಗೊಳುತ ಲಸ್ತವ್ಯಸ್ತ
ವಾದಾ | ಹೊಳಲನೀಕ್ಷಿಸಿ ಮರುಗಿ ನಾಚುತ ತಲೆ ಮುಸುಕನಿಕ್ಕಿ ||
ತಳುವದಾರಯ್ಯುತ್ತ ಕೆಳೆಯನ | ಹೊಲಬನರಿತಾ ಮಸಣದಲ್ಲಿಗೆ |
ಒಲುಭಟಂ ಬರೆ ಕಂಡನೈ ಕಾಣದಿರು ಕಾಸ್ಕೆಯನು || ೩ ||

ಅರಸಿನದ ಲೇಪದಲಿ ಕೆಂಬೂ | ಸರದ ಕಂಠದ ತೊಡವಿನಲಿ ತ |
ನ್ನರಸಿ ಮಕ್ಕಳು ಬಾಯ ಬಿಡಲೆದೆಗೆಡದ ಧೈರ್ಯದಲಿ || ಪಿರಿದು ಸಂತೈ
ಸುತ್ತ ಕೆಳೆತನ | ದೊರೆಯು ನಾವಧ್ಯೋಪಲವಿನೆಲ | ಕೊರೆವ ಮಿತ್ರನ
ಕಂಡು ಸನಿಯಕ್ಕೋಡಿ ನಡೆತಂದ || ೪ ||

ಕೇಳಿರೋ ಚಾಣಕ್ಯ ವಟುವಿಗೆ ಹೇಳಿರೋ | ದ್ವಿಜಕುಲದ ಮೋರೆಗೆ | ಕಾಳಿಮೆಯು ನಿಂತೇಕೆ ಬಳಿವನ ದಾವ ನೀಚಂಗೆ || ಕಾಲ ಸಂಕಲೆ ದೊಡಿಸಲೀಪರಿ | ಜಾಲಗಳ ಚಿತ್ರಿಪನೋ ಆ | ಖೂಳ ರಾಕ್ಷಸನಿದೊ ಎನುತ ಮುಸಕಂ ನಿವಾರಿಸಲು || ೫ ||

ಅನ್ನೆಗಂ ಕಂಗೆಡದೆ ಶಾಂತತೆ | ಯಿಂನೆರೆದ ಚಂದನನೊಡನೆ ಹಾ | ಎನ್ನತೇಸಿದು ಮಿತ್ರ! ಕಾರ್ಯದ ಕಣ್ಣು ಕುರುಡಾಯ್ತೆ || ಇನ್ನೆಗಂ ಪತಿಕಾರ್ಯದಲಿ ಬರ | ಡೆನ್ನಿಸಿದ ಜೀವನಸವಿದಕೆ ಫಲ | ತಾಂನೆಗಳಲೀಪರಿಯೊಳಡ್ಡಂ ಬರ್ಪುದೇ ನೀನು || ೬ ||

ನೀನುಳಿಯೆ ಪತಿ ಕಾರ್ಯ ಸಾಧಕೆ | ಮಾಣಿಕದ ಕಲಶನಿಡುವೆಯಿಂ | ದಾನು ಸಂತಂಗೊಳ್ಳಲೀಪರಿಯುಲ್ಲದುದನೆಸಗಿ || ಆ ನಿಶಿತ ಮತಿಯಿಂದಲಳಿಯು | ಟ್ಕೈನಹುದು ತನ್ನಿಂದ ನೀತಿಯು | ದೇನು ಬಂತಪೆ? ಬಂಡಸಾಲೆಯೆ? ಕೊಂಡುಕೊಳಬಹುದೆ? || ೭ ||

ಎನಲು ಮಮ್ಮಲ ಮರುಗಿ ವಿನ್ನಯು | ಗುಣದ ಚೀರನೆ ಬಲ್ಲನನಗೇ | ಕಿನಿತು ಪರಿಯಿಂದೆಲೆಯು ತೋರುವೆ ಬೆಂದ ಹುಣ್ಣಾನ್ನು || ಕುಸಿಸುವ್ವೈ ಕೊಳ್ಳಿಯಲಿ; ದೈವವು | ಮುನಿದು ಹರಿದಾ ಸ್ವಾಮಿ ಕಾರ್ಯವ| ದೆನುವ ಚಿತ್ತನು ಚಿತ್ತವಣೆಕೆಯು ಮಾಣ್ಡೆ ನಾನೆಂದು || ೮ ||

ಅಮ್ಮ ನಿನ್ನಿಂದಾಗಿ ನಿಮ್ಮಯ | ಸೊಮ್ಮು ಬೀತುದು ಕಡೆಗೆ ನೀವೇ | ಯುಮ್ಮಳಕೆ ಪಕ್ಕಾದಿರೌ, ವಿಧಿಲಿಖಿತಕೇನೆನಲಿ || ನೀಂ ಮರೆದು

ಮನ್ನಿಸಿರಿ ಕೆರಳುತ | ಹಮ್ಮಿನಿಂ ಒಹ ಜನನ ಬಾಯೊಳು ! ಧುಮ್ಮ
ಹುತ ಪಾಪಕ್ಕೆ ಪ್ರಾಯಶ್ಚಿತ್ತವೆಸಗುವೆನು || ೯ ||

ಅನಿತರಲಿ ನೃಪನೊಡನೆ ಚಣಕನ | ತನಯನೈದುತ ಮಂತ್ರಿವ
ರ್ಯಗೆ | ಮಣಿಯೆ ಬೆರಗಿಂ ನಾಚಿ ರಾಕ್ಷಸನುಸಿರದಿರುತಿರಲು || ಗುಣ
ನಿಧಿಯೆ ಶಂಕಿಸುವುದೇತ | ಕ್ಕಿನಿತು ಜಾಲಗಳನ್ನು ನಿನಗೆಂ | ದನು
ಗೊಳಿಸಿದೆನು ಚಿಂತಿಸದಿರಿದೊ ನೃಪನ ಪಿಡಿದೆತ್ತು || ೧೦ ||

ಎನ್ನಲರಸನನೆತ್ತುತೇಕೀ | ಬನ್ನ ವೈಸಲೆ ನೋತು ನೊಪ್ಪಾ |
ದೆನ್ನನೀಪರಿಯಿಂದಲಿರಿಯದೆ ಕೊಲಬಹುದೆ ನೀನು || ಬಿನ್ನಣ ವಿದೇಕಿ
ದಕೊ ಬಂದಿಹೆ | ನಿನ್ನ ಛಂದನನ್ನು ಬಿಡು ಕೊ | ಳ್ಳೆನ್ನ ಹರಣವ
ನೇರುವೆನು ವಧ್ಯೋಪಲಾಗ್ರವನು || ೧೧ ||

ಕೊಲಲುಪಾಯವಿದಲ್ಲ ನಿನ್ನಯ | ತಿಳಿವಿನೆನಕಕೆ ಮಾರುವೋ
ದೆನು | ಉಳಿದವರ ನಾ ಬಗೆವನೇ ನೀ ಬಳ್ಳಿಯಂತಿರಲಿ || ಸಲಹುವೆಯೊ
ನಿನ್ನರಸು ಕುಲಜನ | ನಲಿ ಪರಸಿ ದೀಕ್ಷೆಯೊಳಸಿಯಂ | ಕೊಳುತ ಕತ್ತ
ರಿಸುವೆಯೊ? ಪೇಳೆರಡರೊಳು ಸಮ್ಮತವ || ೧೨ ||

ಆದರೇನೆಸಗುವುದು ನೀತಿಯು | ನೋದುವನೆ ನೃಪರುಳಿದುದಂ
ಕಂ | ಡಾದರೂ ನೀನೆಂದುದಕ್ಕೊಪ್ಪಿದರೆ ಲೋಕದಲಿ || ಸಾಧು ಸಜ್ಜನ
ರೆಂತು ನುಡಿವರು | ಭೇದವಪ್ಪುದು ದಯದೊಳೆನ್ನಂ | ನೋದಿ ಮಿತ್ರನ
ರಕ್ಷಿಸೈ ವಿಪ್ರೋತ್ತಮಾ, ಎಂದ || ೧೩ ||

ಸ್ವಾಮಿಭಕ್ತಿಗೆ ಸೋಲು | ಹಡೆವಾ ಭೂಮಿಯಲ್ಲಿರಬೇಕು ಭಕ್ತಿ, ಸ | ನಾಮನೇ ನಿನಗರುಹಲಾಪೆನೆ ಸತ್ಕುಲಜರಹುದು || ಆ ಮಹಿಮ ರಹ | ನಂದರಾದರೆ ತಾಮಸದಿ ಮುಂದರಿಯದೆಯೊನಿ | ನಾರ್ಗಮವಾದರು ಸ್ವಾಯುತತ್ವಂಗೊಂಡು ಮುದದಿಂದ || ೧೪ ||

ಬಂದಣಿಕೆ ಮರಸೇರು ತ್ರೋಸಧಿ | ಯುಂದದಿಂ ಕಾಣಿಸುತ ಬಸ ವನೆ | ತಿಂದು ಬಿಡುವುದು ಯವನರಾಪರಿ ನಿನ್ನ ದೊರೆಗಳನು || ಒಂದಿ ಪೂರ್ಣಗ್ರಾಸಗೊಳಲಿ | ದ್ದಂದು ನೀತಿಯು ಪಿಡಿದು ಕಡಿದೆನು | ನೊಂದನೇವನು? ಪಿಡಿದ ಬೆಂಕಿಗೆ ಹಸು ಬಿಸಿಗಳುಂಟೆ? || ೧೫ ||

ನೀನೆ ಭಾರತ ಧರೆಯ ನಡೆಯಿಸು | ವಾಸಿಕೆಯನುಳ್ಳಾತನೆಂದರಿ | ತಾನೆಗೆಯ್ದಾ ಯುಕ್ತಿ ನಿನ್ನಲಿ ದೋಷವಿನಿತಿರದು || ಈನೆಗಳ್ದಾ ಯುಕ್ತಿ, ವಿಫಲತೆ | ಯಾನೆ, ಚಂದನ ಬಿಡುವುದೆನ್ನುತ | ನೀನು ನೀತಿಯ ನರಿತು ಹೇಳಲ್ಬಹುದೆ? ಎಂದೆನಲು || ೧೬ ||

ಆಗಲೆಂಗೆಯ್ದುವುದು ಮಿತ್ರನ | ನೀಗಿಯತ್ನಿಪ ರಾಜ ಭಕ್ತಿಯು | ಭಾಗವಂತಿರಲೊಪ್ಪಿದೆನು ಸೀನೆಂದುದಕ್ಕೆನಲು || ಬೇಗದಿಂದಲಿ ಚಂದ್ರ ಗುಪ್ತನ | ನಾಗರುವನಂಗೆಯ್ಯೊಳೊಪ್ಪಿಸಿ | ಸಾಗಿದನು ಚಾಣಕ್ಯನೊ ಡನೆ ಹಿಮಾಲಯಾಶ್ರಮಕೆ || ೧೭ ||

ಮುಳಿಯ ತಿಮ್ಮಪ್ಪಯ್ಯ.